# ದಂಗೆಕೋರರ ವಿನಾಶ!


































* ಕಾರ್ಬೋಕ್ಸಿಲ್ ಏಸಿಡ್ ಗ್ರೂಪ್‌ನ ಫಾರ್ಮುಲಾ. ಇದು ಹಲ್ಲಿನ ಎನಾಮಲನ್ನು ಆಕ್ರಮಿಸಿ, ನೋಯುವ ಕುಳಿಗಳನ್ನುಂಟುಮಾಡುತ್ತದೆ.

ಹಲ್ಲುಗಳ ದೃಢೀಕರಣಕ್ಕೆ,
ದಂತಕ್ಷಯ ನಿವಾರಣೆಗೆ—ಬಿನಾಕಾ ಫ್ಲೋರೈಡ್.

**Results of Chandamama—Camlin Colouring Contest No. 13 (Kannada)**

*1st Prize:* Chandrakant R. Angolkar, Belgaum-3. *2nd Prize:* S. Gururaja Rao, Karnataka-577 401. *3rd Prize:* S. N. Simha, Mysore. *Consolation Prizes:* K. H. Soneji, Ahmedabad; B. Nirmala Visakhapatnam; G. Narasimha Pail, Koteshwar; Rajesh M. Bolar, Bombay - 75; Shivashankar; S. S. B. J.




# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

**ಈ** ಸಂಚಿಕೆಯಿಂದ "ಧೂಮಕೇತು" ಧಾರಾವಾಹಿ ಕಥೆ, ಸ್ವರ್ಗವಾಸಿ "ಚಿತ್ರಾ" ಅವರ ಕುಸುರಿ ಕೆಲಸಗಳ ಪದರು ಪದರಾದ ವರ್ಣರಂಜಿತ ಚಿತ್ರಗಳಿಂದೊಡಗೂಡಿ ಪ್ರಾರಂಭವಾಗಿರುವುದನ್ನು ನೋಡುವಿರಿ. ಈ ಕಾಲದ ಚಂದಮಾಮ ಓದುಗರಲ್ಲಿ ಅತ್ಯಧಿಕ ಸಂಖ್ಯೆಯಲ್ಲಿರುವವರಿಗೆ ಇದು ಹೊಸ ರಚನೆಯೆನಿಸುತ್ತದೆ. ಆದರೆ ಹಳೆಯ ಓದುಗರು ಕೂಡಾ ಆ ಕಥೆಯನ್ನು ಇನ್ನೊಮ್ಮೆ ಓದಲು ಆತುರಪಟ್ಟು ಆಗಾಗ ಕಾಗದ ಬರೆಯುತ್ತಲೇ ಇದ್ದರು. ಆದುದರಿಂದ ಇದು ಎಲ್ಲಾ ಬಗೆಯ ಓದುಗರಿಗೂ ಸಂತೋಷವನ್ನುಂಟುಮಾಡುವುದೆಂದು ನಂಬುತ್ತೇವೆ.

## ಅಮರವಾಣಿ

**ಹಿರಣ್ಯ ಧಾನ್ಯ ರತ್ನಾನಿ ಯಾನಾನಿ ವಿವಿಧಾನಿ ಚ**
**ತಥಾನ್ಯದಪಿ ಯತ್ಕಿಂಚಿತ್ ಪ್ರಜಾಭ್ಯಸ್ಯಾನ್ಮಹೀಪತೇಃ**

ರಾಜರಾದವರಿಗೆ ಚಿನ್ನವೂ, ಧಾನ್ಯವೂ, ರತ್ನಗಳೂ, ಬಗೆಬಗೆಯ ವಾಹನಗಳೂ ಮತ್ತೇನೇ ಆಗಲಿ, ಪ್ರಜೆಗಳಿಂದಲೇ ಬರತಕ್ಕಂಥವು.

ಸಂಪುಟ : ೭೪ ಜೂನ್ '೮೦ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦



# ಪ್ರಶ್ನೋತ್ತರಗಳು

**ಗೇದೆಲ ಹರಿಶಂಕರನಾಯುಡು, ರಾಯಘಡ**

ಪ್ರ: ಭೂಮಿಗೂ ಭೂಮಿಯ ಮೇಲಿರುವ ಪ್ರತಿ ವಸ್ತುವಿಗೂ ಆಕರ್ಷಣ ಶಕ್ತಿ ಇರುವ ಕಾರಣದಿಂದ ಎಲ್ಲಾ ವಸ್ತುಗಳೂ ಭೂಮಿಗೆ ತಾಗಿಕೊಂಡಿವೆ. ಅದೇ ರೀತಿಯಾಗಿ ಸೂರ್ಯನು ಆಕರ್ಷಿಸಿಕೊಂಡಿರುವ ಗ್ರಹಗಳು ಸೂರ್ಯನನ್ನು ಏಕೆ ತಾಗಿಕೊಂಡಿರುವುದಿಲ್ಲ?

ಉ: ಇದರಲ್ಲಿ "ವೇಗ"ದ ಸಮಸ್ಯೆ ಇದೆ. ರಾಕೆಟ್ ಪ್ರಯೋಗದಿಂದ ಅತ್ಯಂತ ವೇಗವನ್ನು ಪಡೆಯುವ ಕೃತ್ರಿಮ ಉಪಗ್ರಹಗಳನ್ನು ಭೂಮಿಯ ಆಕರ್ಷಣೆಯ ಶಕ್ತಿ ತನ್ನ ಸುತ್ತಲೂ ತಿರುಗಿಸ ಬಲ್ಲುದೇ ಹೊರತು ತನ್ನ ಕಡೆಗೇ ಎಳೆದುಕೊಳ್ಳಲಾರದು. ಚಂದ್ರನು ತನ್ನ ವೇಗ ಶಕ್ತಿಯಿಂದಲೇ ಭೂಮಿಯ ಮೇಲೆ ಬೀಳದೆ ಭೂಮಿಯ ಸುತ್ತಲೂ ತಿರುಗುತ್ತಿದ್ದಾನೆ. ಅದೇ ರೀತಿಯಲ್ಲಿ ಎಲ್ಲಾ ಗ್ರಹಗಳಿಗೂ ತಮ್ಮ ತಮ್ಮದೇ ಆದ ವೇಗದ ಶಕ್ತಿಯಿದೆ. ಅಷ್ಟು ದೂರ ಏಕೆ? ಚೆಂಡಾಟದಲ್ಲಿ ಬಲವಾಗಿ ಒದ್ದ ಚೆಂಡು ಭೂಮ್ಯಾಕರ್ಷಣೆಗೆ ವಿರುದ್ಧವಾಗಿ ಮೇಲೆ ಹೋಗಿ, ವೇಗ ತಗ್ಗುವವರೆಗೂ ಭೂಮಿಗೆ ಬಾರದು. ಗ್ರಹಗಳು ತಮ್ಮ ವೇಗ ಶಕ್ತಿಯಿಂದಲೇ ಸೂರ್ಯನ ಮೇಲೆ ಬೀಳದೆ, ಸೂರ್ಯನ ಸುತ್ತಲೂ ನಿಯಮಿತ ಕಕ್ಷೆಗಳಲ್ಲಿ ತಿರುಗುತ್ತವೆ. ಇಂತಹ ವೇಗಶಕ್ತಿ ಇಲ್ಲದಿರುತ್ತಿದ್ದರೆ, ಎಲ್ಲಾ ಗ್ರಹಗಳೂ ಸೂರ್ಯನಲ್ಲಿ ಬಿದ್ದು ನಾಶವಾಗುತ್ತಿದ್ದುವು.

**ವಿ. ಕೆ. ಯಂ. ಲಕ್ಷ್ಮಣರಾವ್, ಕೋಲಾರ್**

ಪ್ರ: ನೀರಿಗೆ ಬಣ್ಣವಿಲ್ಲ, ಆದರೆ ನೀರಿನ ಮೇಲೆ ಕಾಂತಿಬಿದ್ದಾಗ, ಪರಾವರ್ತನೆ ಅಥವಾ ಶೋಷಣೆ ಉಂಟಾಗಿ ತೀರುತ್ತದೆ. ಹಾಗೆ ಆಗುವಾಗ ನೀರು ಬಿಳಿಯಾಗಿಯೋ ಕಪ್ಪಗಿಯೋ, ಏನೋ ಒಂದು ಬಣ್ಣವಾಗಿ ಕಾಣಿಸಬೇಕಷ್ಟೆ? ಹಾಗಾಗುವುದಿಲ್ಲವೇಕೆ?

ಉ: ಎಲ್ಲಾ ಬಣ್ಣಗಳೂ ಸೇರಿದ ಸೂರ್ಯಕಾಂತಿಯನ್ನು ಶೋಷಿಸಬಲ್ಲ ವಸ್ತುಗಳು ಕಪ್ಪಾಗಿ ಕಾಣುತ್ತವೆ. ಕಾಂತಿಯನ್ನು ಪೂರ್ತಿ ಪರಾವರ್ತನೆ ಮಾಡುವ ವಸ್ತುಗಳು ಬೆಳ್ಳಗಾಗಿ ಕಾಣುತ್ತವೆ.

ಸೂರ್ಯ ಕಾಂತಿಯೊಳಗಿನ ಕೆಲವು ಬಣ್ಣಗಳನ್ನು ಮಾತ್ರವೇ ಹೀರಿಕೊಳ್ಳಬಲ್ಲ ವಸ್ತುಗಳು ಹೀರಿ ಕೊಳ್ಳಲಾಗದ ಬಣ್ಣಗಳಲ್ಲಿ ಕಾಣುತ್ತವೆ. ಉದಾಹರಣೆಗೆ, ಎಲೆಗಳು ಹಸುರು ಬಣ್ಣಗಳಲ್ಲಿಯೂ, ಹೂಗಳು ಬೇರೆಬೇರೆ ಬಣ್ಣಗಳಲ್ಲಿಯೂ ಕಾಣುತ್ತವೆ. ನೀರು ಯಾವ ಬಣ್ಣವನ್ನೂ ಹೀರಿ ಕೊಳ್ಳುವುದಿಲ್ಲ. ಆದುದರಿಂದ ನೀರಿನ ಮೂಲಕ ಕಾಂತಿ ಪಸರಿಸಿದಾಗ ಎಲ್ಲಾ ಬಣ್ಣಗಳೂ ನೀರಿನಲ್ಲಿ ಕಾಣುತ್ತವೆ.

ಕಾಂತಿಯನ್ನು ಪರಾವರ್ತನೆ ಮಾಡುವಂತಹ ಶಕ್ತಿ ಸ್ವಲ್ಪ ಮಟ್ಟಿಗೆ ನೀರಿಗಿದೆ. ರಾತ್ರಿಯಲ್ಲಿ ಕಾಲುವೆಗಳನ್ನು ನೋಡಿದರೆ ಎಲ್ಲಾ ಬಣ್ಣಗಳ ಕಾಂತಿಗಳೂ ನೀರಿನಲ್ಲಿ ಪ್ರತಿಫಲಿಸುವುದನ್ನು ನೋಡ ಬಹುದು.

ನೀರಿಗೆ ಸ್ವಂತವಾಗಿ ಬಣ್ಣವಿಲ್ಲದೆ ಹೋಗಲು ಇದೇ ಕಾರಣವಾಗಿದೆ.



## ೮೩

ಒಂದು ಕಾಲದಲ್ಲಿ ಮಗಧದೇಶದ ಹತ್ತಿರ ಚಂಪಕವತಿ ಎಂಬ ಅರಣ್ಯವಿದ್ದಿತು. ಆ ಅರಣ್ಯದಲ್ಲಿದ್ದ ಒಂದು ಕಾಗೆಗೂ, ಒಂದು ಜಿಂಕೆಗೂ ಬಹಳಕಾಲದಿಂದ ಒಳ್ಳೆಯ ಸ್ನೇಹವಿದ್ದಿತು. ಜಿಂಕೆ ಸುಂದರವಾಗಿಯೂ ಖಂಡ ಪುಷ್ಟಿಯಿಂದ ನಯವಾಗಿಯೂ ಕಾಣುತಿತ್ತು.

ಒಂದು ದಿನ ಜಿಂಕೆ ಅರಣ್ಯದಲ್ಲಿ ತನ್ನ ಪಾಡಿಗೆ ತಿರುಗಾಡಿಕೊಂಡಿರುವಾಗ, ಆ ಕಡೆಗೆ ಬಂದ ಒಂದು ನರಿ ಅದನ್ನು ನೋಡಿತು. ಅದು ತನ್ನಲ್ಲಿ "ಒಳ್ಳೇ ಮಾಗಿದ ಹಣ್ಣಿನಂತೆ ಬೆಳೆದಿರುವ ಇದರ ಮಾಂಸದ ರುಚಿಯನ್ನು ಹೇಗೆ ನೋಡಲಿ? ಅದಕ್ಕೆ ಒಂದೇ ಮಾರ್ಗವಿದೆ. ಅದು ನನ್ನನ್ನು ನಂಬುವ ಹಾಗೆ ಮಾಡಿಬಿಡಬೇಕು." ಎಂದುಕೊಂಡು ಜಿಂಕೆಯ ಸಮೀಪಕ್ಕೆ ಹೋಗಿ, "ಏನು ಸುಂದರ ಮಿತ್ರಾ, ಕುಶಲತಾನೇ?" ಎಂದು ಕೇಳಿತು.

"ನೀನಾರೋ ಅರಿಯೆ! ಯಾರು ನೀನು?" ಎಂದು ಜಿಂಕೆ ನರಿಯನ್ನು ಕೇಳಿತು.

"ನನ್ನ ಹೆಸರು ಕ್ಷುದ್ರಬುದ್ಧಿ. ನಾನು ನಮ್ಮ ನರಿ ಜಾತಿಯ ವಕ್ರಬುದ್ಧಿಯನ್ನು ಬಿಟ್ಟವನಾದುದರಿಂದ ನನ್ನವರೆಲ್ಲ ನನ್ನನ್ನು ಹೊರಗೆ ಓಡಿಸಿಬಿಟ್ಟರು. ನೆಮ್ಮದಿಯಿಂದ ಶಾಂತಜೀವನ ನಡೆಸೋಣವೆಂದು ಈ ಅರಣ್ಯಕ್ಕೆ ಬಂದೆನು. ಏಕಾಂಗಿಯಾಗಿರುವೆನೆಂಬ ಕೊರತೆಯೊಂದಿತ್ತು. ಈಗ ನೀನೊಬ್ಬ ಒಳ್ಳೆಯ ಸ್ನೇಹಿತನಾಗಿ ದೊರೆತುದರಿಂದ ನನ್ನ ಕುಂಟು ಜೀವನ ಸರಿಯಾಗಿ ಹೋಯಿತು. ನಾನಿನ್ನು ಶಾಶ್ವತವಾಗಿ ನಿನ್ನ ಜತೆಯಲ್ಲೇ ಇರುವುದು ಅಂತ ಮಾಡಿದ್ದೇನೆ. ಆಗಬಹುದಷ್ಟೆ?" ಎಂದು ನರಿ ಕೇಳಿತು. "ಆಗಬಹುದು" ಎಂದಿತು ಜಿಂಕೆ.

ಸಾಯಂಕಾಲವಾಗುವವರೆಗೂ ಅವೆರಡೂ ಒಟ್ಟಿಗೇ ತಿರುಗಾಡುತ್ತ ಜಿಂಕೆಯ ಮನೆಗೆ ತಲಪಿದುವು. ಆ ಜಿಂಕೆಯೊಂದಿಗೆ ತುಂಬಾ ಕಾಲದಿಂದ ಸ್ನೇಹವಾಗಿದ್ದ ಸುಬುದ್ಧಿ ಎಂಬ ಕಾಗೆ ಚಂಪಕ ವೃಕ್ಷದ ಕೊಂಬೆಯ ಮೇಲೆ ಕುಳಿತುಕೊಂಡು, ಜಿಂಕೆಯೊಂದಿಗೆ ಬರುವ ನರಿಯನ್ನು ನೋಡಿತು. ಏನೋ ಸಂದೇಹವಾಯಿತು ಕಾಗೆಗೆ. ರಾತ್ರಿಯಲ್ಲಿ ಅದು ನರಿಗೆ ತಿಳಿಯದಂತೆ ಜಿಂಕೆಯನ್ನು ಸೈಗೆ ಮಾಡಿ ಮರೆಯಾದ ಜಾಗಕ್ಕೆ ಕರೆದು, "ಮಿತ್ರಾ ಅದು ಯಾರು? ನಿನ್ನೊಂದಿಗೆ



ಏಕೆ ಬಂದ?" ಎಂದು ಕೇಳಿತು. "ಈ ನರಿ ನಮ್ಮ ಸ್ನೇಹವನ್ನು ಬಯಸಿ ಬಂದಿದೆ. ನಿನಗೂ ಪರಿಚಯ ಮಾಡಿಸುತ್ತೇನೆ" ಎಂದಿತು ಜಿಂಕೆ. ಅದಕ್ಕೆಕಾಗೆ, "ಮಿತ್ರಾ, ಅಪರಿಚಿತರೊಂದಿಗೆ ಆಕಸ್ಮಿಕವಾಗಿ ಸ್ನೇಹ ಮಾಡುವುದು ಒಳ್ಳೆಯದಲ್ಲ ಗೊತ್ತಾ? ಒಬ್ಬರ ಕುಲ ಗೋತ್ರ ಗುಣ ನಡತೆ ಗಳಾವುದೂ ತಿಳಿಯದೆ ಆಶ್ರಯ ಕೊಡುವುದು ಒಳ್ಳೆಯದಲ್ಲ. ಒಂದು ಬೆಕ್ಕು ಮಾಡಿದ ತಪ್ಪಿನಿಂದಾಗಿ ಜರದ್ಗವವೆಂಬ ಹದ್ದು ತನ್ನ ಪ್ರಾಣವನ್ನೇ ಕಳೆದುಕೊಳ್ಳಬೇಕಾಗಿ ಬಂತು." ಎಂದಿತು.

"ಅದು ಹೇಗೆ ನಡೆಯಿತು?" ಎಂದು ಜಿಂಕೆ ಕಾಗೆಯನ್ನು ಕೇಳಿತು. ಕಾಗೆ ಹೀಗೆಂದಿತು:

### ಜರದ್ಗವ, ದೀರ್ಘಕರ್ಣರ ಕಥೆ

ಗಂಗಾ ತೀರದಲ್ಲಿ ಗೃಧ್ರಕೂಟವೆಂಬ ಬೆಟ್ಟದ ಮೇಲೆ ಹಳೆಯಕಾಲದ ದೊಡ್ಡದೊಂದು ಹೆಮ್ಮರದ ಪೊಟರೆಯಲ್ಲಿ ಜರದ್ಗವವೆಂಬ ಹದ್ದುವಾಸವಾಗಿದ್ದಿತು. ದುರದೃಷ್ಟದಿಂದಾಗಿ ಯಾವುದೋ ಒಂದು ಭೇಟೆಯ ಸಮಯದಲ್ಲಿ ಅದರ ಕಣ್ಣುಗಳೂ ಉಗುರುಗಳೂ ಹೋಗಿಬಿಟ್ಟವು. ಅದರ ಬನ್ನ ನೋಡಿ ಆ ಮರದ ಮೇಲೆ ವಾಸಮಾಡುವ ಪಕ್ಷಿಗಳು ಅದರ ಮೇಲೆ ಕನಿಕರ ತಾಳಿ, ತಮ್ಮ ಆಹಾರದಿಂದ ಅದಕ್ಕೂ ಸ್ವಲ್ಪ ಸ್ವಲ್ಪ ಕೊಡುತ್ತಿದ್ದುವು. ಹೀಗೆ ಆ ಹದ್ದು ಅವುಗಳ ಮೇಲೆ ಆಧಾರಪಟ್ಟು ಬದುಕಿಕೊಂಡು, ದೊಡ್ಡ ಪಕ್ಷಿಗಳು ಆಹಾರ ಹುಡುಕಿಕೊಂಡು ಹೋದಾಗ, ಅವುಗಳ ಮರಿಗಳನ್ನು ನೋಡಿಕೊಂಡಿತ್ತು.

ಒಂದುಸಾರಿ ದೊಡ್ಡ ಪಕ್ಷಿಗಳೆಲ್ಲ ಹೊರಗೆ ಹೋಗಿದ್ದ ಸಮಯದಲ್ಲಿ, ಅವುಗಳ ಮರಿಗಳನ್ನು ತಿನ್ನ ಬೇಕೆಂದು ಹೊಂಚುಹಾಕುತ್ತಿದ್ದ ದೀರ್ಘಕರ್ಣವೆಂಬ ಬೆಕ್ಕು ಧೈರ್ಯದಿಂದ ಮುಂದೆ ಬಂದಿತು. ಬೆಕ್ಕನ್ನು ನೋಡಿ ಮರಿ ಹಕ್ಕಿಗಳು ಹೆದರಿ ಕಿರಿಚಾಡತೊಡಗಿ ದುವು. ಆಗ ಕುರುಡು ಹದ್ದು "ಯಾರದೂ?" ಎನ್ನುತ್ತ ಹೊರಗೆ ಬಂತು. ಅದನ್ನು ನೋಡಿ ದೀರ್ಘ ಕರ್ಣ ಬೆಕ್ಕು ತನ್ನ ಮನಸ್ಸಿನಲ್ಲಿ "ಅಯ್ಯೊ! ಎಷ್ಟು ದೊಡ್ಡ ಹದ್ದು! ನಾನು ಸತ್ತೆ! ಆದರೆ ಅಪಾಯ ಬರುವ ಮೊದಲೇ ಅದನ್ನು ಕುರಿತು ಹೆದರಬೇಕೇ ಹೊರತು, ತೀರಾ ಮೈಮೇಲೆ ಬಂದಾಗ ಅದರಿಂದ ಪಾರಾಗುವ ಮಾರ್ಗ ನೋಡಬೇಕು. ಇದಕ್ಕೆ ನಾನು ಬಂದ ಸಂಗತಿ ಗೊತ್ತಾಗಿಹೋದುದರಿಂದ ಓಡಿ ಹೋಗಿ ಉಪಯೋಗವಿಲ್ಲ." ಎಂದು ಕೊಂಡಿತು.

ಬೆಕ್ಕು ಹದ್ದಿನ ಸಮೀಪಕ್ಕೆ ಎರಡು ಹಜ್ಜೆಯಿಟ್ಟು, "ಅಯ್ಯಾ, ಪಕ್ಷಿರಾಜರೇ! ನನ್ನ ನಮಸ್ಕಾರ ಸ್ವೀಕ ರಿಸಿರಿ" ಎಂದಿತು.

"ಯಾರು ನೀನು?" ಎಂದು ಕೇಳಿತು ಹದ್ದು. "ನಾನು ದೀರ್ಘಕರ್ಣ ಬೆಕ್ಕು" ಎಂದು ಬೆಕ್ಕು ಹೇಳುತ್ತಲೇ, ಜರದ್ಗವ ಹದ್ದು ಕೋಪದಿಂದ, "ಮೊದಲು ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ನಿನ್ನ ಪ್ರಾಣ ತೆಗೆಯುತ್ತೇನೆ" ಎಂದಿತು.

"ಕೋಪಿಸಬಾರದು ಹೀಗೆ ಒಮ್ಮೆಗೇ. ನನ್ನ ಮಾತು ಲಾಲಿಸಿರಿ. ಆಮೇಲೆ ನನ್ನನ್ನು ಕೊಲ್ಲಬೇಕೆಂದು ತೋರಿದರೆ ಕೊಂದುಬಿಡಿ. ಒಂದು ಕುಲದವನೆಂದೋ, ಜಾತಿಯವನೆಂದೋ ಒಬ್ಬನನ್ನು ಗೌರವಿಸುವುದೋ, ಕೊಲ್ಲುವುದೋ ಸಂಭಾವ್ಯವೆನಿಸುತ್ತದೆಯೆ? ಯಾರ ಪ್ರವರ್ತನೆ ಹೇಗಿರುವುದೆಂದು ತಿಳಿದ ಮೇಲೆಯೇ ಸನ್ಮಾನಿಸುವುದೋ ಕೊಲ್ಲುವುದೋ ಮಾಡುತ್ತಾರೆ ಹಿರಿಯವರು. ಇದು ನಿಮಗೆ ತಿಳಿಯದ ವಿಷಯ ಅಲ್ಲವಷ್ಟೆ?" ಎಂದಿತು ಬೆಕ್ಕು.

"ನೀನು ಇಲ್ಲಿಗೆ ಏಕೆ ಬಂದೆ?" ಎಂದು ಕೇಳಿತು ಜರದ್ಗವ. "ಹಾಗೆ ಕೇಳಿರಿ. ನಾನು ಈ ಪವಿತ್ರವಾದ ಗಂಗಾ ತೀರದಲ್ಲಿ ವಾಸಮಾಡುತ್ತ, ದಿನಾ ಗಂಗೆಯಲ್ಲಿ ಪುಣ್ಯಸ್ನಾನಮಾಡುತ್ತ, ಬ್ರಹ್ಮಚರ್ಯ ವ್ರತವನ್ನು ಹಿಡಿದು, ಹಾಗೆಯೇ ಚಾಂದ್ರಾಯಣ ವ್ರತನಿಷ್ಠೆ ಯನ್ನು ಅಭ್ಯಾಸಮಾಡಿಕೊಂಡಿದ್ದೇನೆ. ತಾವು ಇಲ್ಲಿ ಸ್ಮೃತಿಗಳನ್ನು ತುಂಬ ಚೆಂದಾಗಿ ಅಧ್ಯಯನಮಾಡುವು ದಾಗಿ ಪಕ್ಷಿಗಳು ಮಾತಾಡಿಕೊಳ್ಳುವುದನ್ನು ಕೇಳಿ, ವಯೋವೃದ್ಧರೂ ಜ್ಞಾನವೃದ್ಧರೂ ಆದ ತಮ್ಮಿಂದ ಧರ್ಮ ಸೂಕ್ಷ್ಮಗಳನ್ನು ತಿಳಿದುಕೊಳ್ಳೋಣವೆಂದು ಬಂದಿದ್ದೇನೆ. ಹೀಗೆ ನಿಮ್ಮ ಮೇಲಿನ ಗೌರವದಿಂದ ಅತಿಥಿಯಾಗಿ ಬಂದ ನನ್ನನ್ನು ತಾವು ಕೊಲ್ಲುವೆನೆಂದು ಹೇಳಿದ್ದು ಕೇಳಿ ತಮಗೆ ಧರ್ಮವೆಂದರೇನೆಂದು ಗೊತ್ತಿಲ್ಲವೆಂದಾಯಿತು. ಮನೆಗೆ ಅತಿಥಿಯಾಗಿ ಬಂದ ಶತ್ರುವನ್ನು ಕೂಡಾ ಆತಿಥ್ಯ ಕೊಟ್ಟು ಉಪಚರಿಸ ಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ತನ್ನನ್ನು ಕಡಿಯಲು ಬಂದವನಿಗೆ ಕೂಡಾ ಮರಗಳು ನೆರಳನ್ನೇ ಕೊಡುತ್ತವೆ. ಒಂದು ಮನೆಯಿಂದ ಹೊರದೂಡಲ್ಪಟ್ಟ ಅತಿಥಿ, ತನ್ನನ್ನು ಹೊರಡಿಸಿದ ಗೃಹಸ್ಥನ ಎಲ್ಲಾ ಪುಣ್ಯ ಗಳನ್ನೂ ತೆಗೆದುಕೊಂಡು ಹೋಗಿಬಿಡುತ್ತಾನಂತೆ. ಅತಿಥಿ ಎಲ್ಲಾ ದೇವತೆಗಳಿಗೂ ಪ್ರತಿನಿಧಿ" ಎಂದು ತುಂಬಾ ನಯವಾಗಿ ಹೇಳಿತು ಬೆಕ್ಕು.

ಅದನ್ನು ಕೇಳಿ ಹದ್ದು, "ಏನಾದರೂ ಬೆಕ್ಕುಗಳಿಗೆ ರೆಕ್ಕೆಗಳು ಬಾರದ ಹಕ್ಕಿ ಮರಿಗಳನ್ನು ತಿನ್ನುವುದೆಂದರೆ ಬಲು ಇಷ್ಟ. ಈ ಮರದಲ್ಲಿ ಇನ್ನೂ ರೆಕ್ಕೆ ಬಾರದ



ಬೆಕ್ಕ ಮಕ್ಕಳು ತುಂಬಾ ಇವೆ ನನ್ನನ್ನು ನಂಬಿಕೊಂಡು. ಅದಕ್ಕೇ ನಿನಗೆ ಹಾಗೆ ಹೇಳಿದೆ" ಎಂದಿತು.

ಬೆಕ್ಕು ನೆಲವನ್ನು ಮೆಟ್ಟಿದ ಕೈಗಳಿಂದ ತನ್ನ ಕಿವಿಗಳನ್ನು ಮುಚ್ಚಿಕೊಂಡು, "ಶಿವ ಶಿವಾ! ನಾನು ಸ್ಮೃತಿಗಳನ್ನು ಸ್ವಲ್ಪ ಮಟ್ಟಿಗೆ ಓದಿಕೊಂಡಿದ್ದೇನೆ. ವಿಕಾರಗಳನ್ನು ಬಿಟ್ಟುಕೊಟ್ಟಿದ್ದೇನೆ. ಚಾಂದ್ರಾಯಣ ಉಪವಾಸ ವ್ರತ ಕೈಕೊಂಡಿದ್ದೇನೆ. ಅನೇಕ ವಿಷಯಗಳಲ್ಲಿ ಧರ್ಮ ಶಾಸ್ತ್ರಗಳಲ್ಲಿ ಪರಸ್ಪರ ವಿಭೇದಗಳು ಕಂಡುಬಂದರೂ ಅಹಿಂಸೆಯೇ ಪರಮ ಧರ್ಮ ಎಂಬುದನ್ನು ಏಕಗ್ರೀವವಾಗಿ ಒಪ್ಪಿವೆ. ಅದಕ್ಕೆ ಬೇರೆ ಕಾರಣವೇನೂ ಇಲ್ಲ. ಇತರರಿಗೆ ಎಂತಹ ಹಾನಿಯನ್ನೂ ಮಾಡದೆ, ಇತರರು ತನಗೆ ಮಾಡಿದ ಹಾನಿಯನ್ನು ಕ್ಷಮಿಸಿದವನು ನೇರಾಗಿ ಸ್ವರ್ಗಕ್ಕೇ ಹೋಗುತ್ತಾನೆ. ಸತ್ತುಹೋಗಿಬಿಟ್ಟರೆ ಸಂಚಿತ ಪುಣ್ಯವಿದ್ದರೆ ಅದೊಂದೇ ಜತೆಯಲ್ಲಿ ಬರುತ್ತದೆ. ಉಳಿದುದೆಲ್ಲಾ ದೇಹದೊಂದಿಗೇ ನಾಶವಾಗುತ್ತದೆ. ತಿನ್ನುವವನಿಗೆ ತಾತ್ಕಾಲಿಕ ಜಿಹ್ವಾ ಚಾಪಲ್ಯ ಮಾತ್ರವೇ ತೀರುತ್ತದೆ. ತಿನ್ನಲ್ಪಡುವವನಾದರೋ ತನ್ನ ಪ್ರಾಣವನ್ನೇ ಕಳೆದುಕೊಳ್ಳುತ್ತಾನೆ. ಸಾವು ಆಕ್ರಮಿಸಿಕೊಳ್ಳುವಾಗ ಆ ಪ್ರಾಣಿ ಅನುಭವಿಸುವ ನೋವು ಇತರರಿಗೆ ಗೊತ್ತಾಗುವಂಥಾದ್ದಲ್ಲ. ಹಾಳು ಹೊಟ್ಟೆಗಾಗಿ ಇತರರ ಪ್ರಾಣ ತೆಗೆದು ಪಾಪದ ಮೂಟೆ ಕಟ್ಟಿಕೊಳ್ಳುವುದುಂಟೇ! ಶಿವಶಿವಾ!" ಎಂದಿತು. ದೀರ್ಘ ಕರ್ಣ ಬೆಕ್ಕಿನ ಮಾತಿಗೆ ಮೋಸ ಹೋಗಿ ಪಕ್ಷಿಗಳಿಗೆ ತಿಳಿಯದಂತೆ ಆ ಬೆಕ್ಕನ್ನು ಮರದ ಪೊಟರೆಯಲ್ಲಿರಲು ಅನುವುಮಾಡಿ ಕೊಟ್ಟಿತು ಹದ್ದು. ಹೀಗೆ ಕುರುಡು ಹದ್ದನ್ನು ಮೋಸಪಡಿಸಿ ಅದರ ಮನೆಸೇರಿದ ಬೆಕ್ಕು ದಿನಾ ಯಾವುದೋ ಒಂದು ಹಕ್ಕಿಯ ಮರಿಯನ್ನು ಸದ್ದಿಲ್ಲದೆ ಪೊಟರೆಯೊಳಗೆ ತಂದು ಕಬಳಿಸಿಕೊಂಡಿತ್ತು.

ಕೆಲವು ದಿನ ಕಳೆಯುವಷ್ಟರಲ್ಲಿ ತಮ್ಮ ಮರಿಗಳನ್ನು ಕಳೆದುಕೊಂಡ ದೊಡ್ಡ ಪಕ್ಷಿಗಳು, ಹಂತಕನನ್ನು ಕಂಡುಹಿಡಿಯಲಿಕ್ಕಾಗಿ ಎಲ್ಲವೂ ಕೂಡಿ ಚರ್ಚೆಮಾಡತೊಡಗಿದುವು. ಅದನ್ನು ನೋಡಿ ಇನ್ನು ಆ ಪಕ್ಷಿಗಳಿಗೆ ತನ್ನ ಗುಟ್ಟು ಗೊತ್ತಾಗಿಬಿಡುತ್ತದೆಂದು ದೀರ್ಘ ಕರ್ಣ ಬೆಕ್ಕಿಗೆ ಗೊತ್ತಾಯಿತು. ಆ ಕೂಡಲೇ ಬೆಕ್ಕು ಮರದ ಪೊಟರೆಯನ್ನು ಬಿಟ್ಟು ಸಪ್ಪಳಿಲ್ಲದೆ ಎತ್ತಲೋ ಓಡಿ ಹೋಯಿತು.

ಪಕ್ಷಿಗಳು ಆ ಪ್ರದೇಶದಲ್ಲೆಲ್ಲಾ ಹುಡುಕಾಡುತ್ತಿರಲು, ಮರದ ಪೊಟರೆಯೊಳಗೆ ಎಳೆಗರಿಗಳೂ ಎಲುವಿನ ಚೂರುಗಳೂ ಇರುವುದನ್ನು ನೋಡಿದುವು. ಮತ್ತೇನು? ಕುರುಡು ಹದ್ದೇ ತಮ್ಮ ಮರಿಗಳನ್ನು ತಿಂದಿತೆಂದು ತೀರ್ಮಾನಿಸಿ, ಎಲ್ಲಾ ಹಕ್ಕಿಗಳೂ ಸೇರಿ ಆ ಹದ್ದನ್ನು ಕೊಂದು ಹಾಕಿದುವು.






ಹಿಂದಿನ ಒಂದು ಕಾಲದಲ್ಲಿ ಕುಂಡಲಿನಿ ಎಂಬುದೊಂದು ದ್ವೀಪರಾಜ್ಯವು ತುಂಬಾ ಪ್ರಸಿದ್ಧವಾಗಿತ್ತು. ಚಿತ್ರಸೇನನೆಂಬವನು ಅಲ್ಲಿಯ ರಾಜನಾಗಿದ್ದನು. ಅವನು ರಾಜ್ಯಾಧಿಕಾರಕ್ಕೆ ಬಂದು ಎರಡು ವರ್ಷಗಳಾಗುವುದಕ್ಕೆ ಮೊದಲೇ ಪ್ರಜೆಗಳ ಒಳಿತನ್ನೇ ದೃಷ್ಟಿಯಲ್ಲಿಟ್ಟುಕೊಂಡು ಅನೇಕ ಯೋಜನೆಗಳನ್ನು ಹಾಕಿ ಅಮಲು ಪಡಿಸ ತೊಡಗಿದ್ದನು. ತನ್ನ ಪ್ರಜೆಗಳು ಯಾವ ಕೊರತೆಯೂ ಇಲ್ಲದೆ ಎಲ್ಲಾ ಸುಖ ಸೌಕರ್ಯಗಳಿಂದ ತೃಪ್ತರಾಗಬೇಕೆಂದೂ, ತನ್ನ ರಾಜ್ಯವು ರಾಮರಾಜ್ಯವಾಗಬೇಕೆಂದೂ ಆತನಿಗೆ ಮಹತ್ವಾಕಾಂಕ್ಷೆಯಿದ್ದಿತು. ಅಂತೆಯೇ ತುಂಬಾ ಕುತೂಹಲದಿಂದ, ಉತ್ಸಾಹದಿಂದ ಚಿತ್ರಸೇನ ಮಹಾರಾಜನು ಪ್ರಜೆಗಳ ಮೇಲೆ ಹಾಕಿದ ಎಲ್ಲಾ ತೆರಿಗೆಗಳನ್ನೂ ಅರ್ಧಕ್ಕರ್ಧ ಕಡಿಮೆ ಮಾಡಿದನು.

ಈ ಬಗೆಯ ರಾಜನ ಧರ್ಮ ಗುಣವನ್ನು ಪ್ರಜೆಗಳು ನೂರು ನಾಲಗೆಗಳಿಂದ ಹೊಗಳುತ್ತ ಸಂತೋಷಪಟ್ಟರು. ರಾಜ್ಯದಲ್ಲಿ ಎಲ್ಲಿ ನೋಡಿದರೂ ಚಿತ್ರಸೇನ ರಾಜನ ಧರ್ಮವನ್ನೂ ದಯೆಯನ್ನೂ ಹೊಗಳುವವರೇ ಕಂಡು ಬಂದರು. ಯಾವ ಮೂಲೆಗೆ ಹೋದರೂ ರಾಜನ ಗುಣಗಾನದ ಹಾಡುಗಳೇ.

ಇದೆಲ್ಲಾ ಸರಿಯೇ. ಧರ್ಮ ಗುಣಗಳುಳ್ಳ ರಾಜನ ಕೀರ್ತಿ ದಶದಿಶೆಗಳಲ್ಲಿ ಮೊಳಗುವ ವಿಷಯ ಎಲ್ಲರೂ ಸಂತೋಷಿಸ ತಕ್ಕದ್ದೇ. ಆದರೆ ಹಾಗೆ ರಾಜನ ಕೀರ್ತಿ ಮೊಳಗುತ್ತಿದ್ದ ರೀತಿಯಲ್ಲೇ, ರಾಜನ ಖಜಾನೆಯು ಘನತೆ ಕರಗುತ್ತಾ ಹೋಗುತಿತ್ತು. ಖಜಾನೆಯೊಳಗಿನ ಹಣವು ಖರ್ಚಿನ ಬಾಗಿಲಿನಲ್ಲಿ ಅದರ ಪಾಡಿಗೆ ಹರಿದು ಹೋಗುತ್ತಾ ಇದ್ದರೆ, ಬಂದು ಸೇರುವ ಬಾಗಿಲು ಸಪೂರವಾಗಿ ಹೋದರೆ ಖಜಾನೆ ತಳಗಾಣದೆ ಮತ್ತೇನಾದೀತು?

ಹೀಗೆ ಧನಾಗಾರವು ಬರಿದಾಗುತ್ತಾ ಬಂದಂತೆ ಪರಿಪಾಲನೆಯಲ್ಲಿ ತಾರುಮಾರು ಬರಲು ಪ್ರಾರಂಭವಾಯಿತು. ಅಧಿಕಾರಿಗಳಿಗೆ ಗಾಬರಿಯಾಯಿತು.

ಚಿತ್ರಸೇನನ ಪ್ರಧಾನ ಮಂತ್ರಿ ಬುದ್ಧಿ ಸೂಕ್ಷ್ಮತೆಯುಳ್ಳವನಾಗಿದ್ದನು. ಅವನು ರಾಜನ ಸಂಕಲ್ಪ



ಸಾಹಸದಿಂದ ಚಿತ್ರಸೇನನೊಂದಿಗೆ, "ಮಹಾರಾಜರೇ, ನಿಮ್ಮ ಶಾಸನಗಳೆಲ್ಲ ಪ್ರಜೆಗಳಿಗೆ ಸೌಖ್ಯವಾಗಿರುವುದು ನಿಜವೇ. ಇಲ್ಲಿ ನಮ್ಮ ಧನಾಗಾರವು ಬತ್ತಿ ಹೋಗುವ ಸ್ಥಿತಿಗೆ ಬಂದಿದೆ. ಧನವಿಲ್ಲದಿದ್ದರೆ ಯಾವ ಕೆಲಸವೂ ಸಾಧ್ಯವಾಗದಷ್ಟೆ? ಕಡೆಗೆ ಹೊಗಳುವ ಪ್ರಜೆಗಳೇ ದೂರುತ್ತಾರೆ. ಹೇಳಿದ ಮಾತನ್ನು ನಡೆಸಲಾರದ ಮೇಲೆ ನಾನು ಹೇಗೆ ನಿರ್ವಾಹದ ಸೂತ್ರ ಹಿಡಿಯಲಿ? ಆದುದರಿಂದ ನನ್ನನ್ನು ಈ ಬಾಧ್ಯತೆಯಿಂದ ತಪ್ಪಿಸಬೇಕೆಂದು ಪ್ರಭುಗಳನ್ನು ಕೇಳಿಕೊಳ್ಳುತ್ತೇನೆ" ಎಂದನು.

"ಅಷ್ಟೊಂದು ವಿಷಮಿಸಿ ಹೋಯಿತೇನು ಪರಿಸ್ಥಿತಿ?" ಎಂದು ರಾಜನು ಆಶ್ಚರ್ಯದಿಂದ ಪ್ರಶ್ನೆ ಮಾಡಿದನು.

"ಅದನ್ನೇನು ಹೇಳಲಿ ಮಹಾರಾಜರೇ, ಅತ್ತ ಉದ್ಯೋಗಸ್ಥರಿಗೂ, ಇತ್ತ ಸೈನಿಕರಿಗೂ ಪ್ರತಿ ತಿಂಗಳೂ ಸಂಬಳವನ್ನು ಕೊಡುತ್ತಾ ಇರಬೇಕು. ಇನ್ನು ಮುಂದಿನ ಸಂಬಳದ ದಿನಕ್ಕೆ ಒಂದು ವಾರವಿದೆ. ಇರುವ ಧನದ ಲೆಕ್ಕ ನೋಡಿದರೆ, ನೀರು ಹಾಕುವ ತೋಟಮಾಲಿಗಳಿಗೆ ಕೊಡುವ ಭತ್ಯಗಳಿಗೂ ಸಾಕಾಗಲಾರದೆಂದು ತೋರುತ್ತದೆ." ಎಂದನು ಮಂತ್ರಿ ಬಾಡಿದ ಮುಖದಿಂದ.

ಚಿತ್ರಸೇನ ಮಹಾರಾಜನು ಸ್ವಲ್ಪ ಆಲೋಚನೆ ಮಾಡಿ ತಲೆ ದೂಗಿ, "ಸರಿ. ನಾಳೆಯದಿನ ಸಾರ್ವಜನಿಕರ ಮಹಾ ದರ್ಬಾರಿಗೆ ಏರ್ಪಾಡು ಮಾಡಿರಿ. ಎಲ್ಲಾ ರಾಜೋದ್ಯೋಗಿಗಳೂ, ಪ್ರಜಾ ಪ್ರಮುಖರೂ ಸಭೆಗೆ ಬರಬೇಕೆಂದು ಡಂಗುರ ಹೊಡೆಸಿರಿ. ಮಹಾ ಸಭೆಯಲ್ಲಿ ಏನೋ ಒಂದು ಆಲೋಚನೆ ಬಾರದೆ ಹೋಗದು" ಎಂದನು.

"ಆಗಲಿ ಮಹಾಪ್ರಭು" ಎಂದು ಮಂತ್ರಿ ಅಲ್ಲಿಂದೆದ್ದು ಆಚೆಗೆ ಹೋದನು. ಮಹಾ ದರ್ಬಾರು ಏರ್ಪಡಿಸುವುದರಿಂದ ಏನು ಒಳಿತಾಗುವುದೆಂದು

ವನ್ನೂ, ಮನೋಭಾವವನ್ನೂ ಗಮನಿಸಿಕೊಂಡೇ ಇದ್ದನು. ಆದರಿಂದ ಬರಲಿರುವ ಫಲಿತವೇನೆಂಬುದು ಕೂಡಾ ಅವನು ಮುಂದಾಗಿಯೇ ಅರಿತಿದ್ದನು. ರಾಜನು ಆಲೋಚನೆ ಕೇಳಿದರಷ್ಟೇ ಅವನು ತನ್ನ ಅಭಿಪ್ರಾಯ ತಿಳಿಸಬೇಕಿತ್ತು. ಹಾಗೆ ಅಲ್ಲಿನ ವಿಧಿಯಿದ್ದರೂ ಅವಕಾಶ ದೊರಕಿದಾಗೆಲ್ಲಾ ತನ್ನ ಅಭಿಪ್ರಾಯವನ್ನು ಸೂಚಕವಾಗಿ ತಿಳಿಸಿಯೂ ಇದ್ದನು. "ಅದೆಲ್ಲಾ ರಾಜಲಕ್ಷ್ಮಿ ನೋಡಿಕೊಳ್ಳುತ್ತಾಳೆ. ನನ್ನ ಕಾಲದಲ್ಲಿ ಪ್ರಜೆಗಳಿಗೆ ಶಾಶ್ವತವಾದ ಸಂತೋಷವಿರಲೇಬೇಕು. ಆ ಪುಣ್ಯವೇ ರಾಜ್ಯಕ್ಕೆ ಒಳ್ಳೇದು ಮಾಡುತ್ತದೆ. ಈವಿಷಯವಾಗಿ ಯಾರೂ ಗಾಬರಿಯಾಗಬೇಕಾಗಿಲ್ಲ. ಸುಮ್ಮನಿರಿ!" ಎಂದು ರಾಜನು ಮಂತ್ರಿಯ ಬಾಯಿಯನ್ನು ಮುಚ್ಚಿಸಿ ಬಿಡುತ್ತಿದ್ದನು.

ಅಂತೂ ಇಂತೂ ಖಜಾನೆ ಖಾಲಿಯಾಗುವ ಘಟ್ಟಕ್ಕೇ ಬಂದು ನಿಂತಿತು. ಇನ್ನು ಸುಮ್ಮನಿದ್ದರೆ ಮುಪ್ಪು ಬರುವುದೇ ಸರಿ ಎಂದುಕೊಂಡು ಮಂತ್ರಿ



ಮಂತ್ರಿಗೆ ಗೊತ್ತಾಗಲಿಲ್ಲ. ಹಾಗೆಯೇ ಕುಂಡಲಿನೀ ರಾಜ್ಯದೊಳಗೆಲ್ಲಾ ಡಂಗುರ ಸಾರಲಾಯಿತು. ಅದನ್ನು ಕೇಳಿದ ಪ್ರಜೆಗಳು, ಮಹಾದರ್ಬಾರು ಏತಕ್ಕೋ, ಏನು ವಿಶೇಷವೋ ಎಂದುಕೊಳ್ಳುತ್ತ, ಒಬ್ಬೊಬ್ಬರೂ ತಮ ತಮಗೆ ತೋರಿದಂತೆ ಮಾತಾಡ ತೊಡಗಿದರು. ರಾಜನು ಧರ್ಮಶೀಲನೆಂಬ ಸಂಗತಿ ಎಲ್ಲರಿಗೂ ಗೊತ್ತಿದ್ದುದೇ. ಆದುದರಿಂದ ಕೆಲವರು, "ಮತ್ತೇನಿಲ್ಲ. ಈಗ ಇರುವ ತೆರಿಗೆಗಳನ್ನು ಕೂಡಾ ತೆಗೆದು ಹಾಕಿಬಿಡುತ್ತಾರೆ. ನಮ್ಮ ಸಂತೋಷ ನೋಡಲಿಕ್ಕಾಯೇ ಸಭೆ ಕರೆಯುತ್ತಿದ್ದಾರೆ! ಮಹಾರಾಜನೆಂದರೆ ಇವನೇ ಸರಿ!" ಎಂದು ಹೇಳಿದರು. ಕ್ಷಣ ಮಾತ್ರದಲ್ಲಿ ಇದೇ ಒಂದು ಮುಖ್ಯ ವದಂತಿಯಾಗಿ ಹೋಯಿತು.

ಮರು ದಿನ ಮಹಾದರ್ಬಾರು ಮಂಟಪಕ್ಕೆ ಪ್ರಜೆಗಳು ಸಂತೋಷ ವಾಹಿನಿಯಲ್ಲಿ ತೇಲಿಕೊಂಡೇ ಬಂದು ಸೇರತೊಡಗಿದರು. ರಾಜೋದ್ಯೋಗಿಗಳೂ, ನಗರದೊಳಗಿನ ದೊಡ್ಡ ದೊಡ್ಡವರೂ ಬಂದು ಸಭಾಲಂಕಾರ ಮಾಡಿದರು. ಚಿತ್ರಸೇನ ರಾಜನು ಬಂದು ಸಿಂಹಾಸನದ ಮೇಲೆ ಮಂಡಿಸಿದನು. ಜಯ ಘೋಷವೆದ್ದು ಶಾಂತವಾದ ಮೇಲೆ, ರಾಜನ ಆಜ್ಞೆಯಂತೆ ಮುಖ್ಯಮಂತ್ರಿ ಸಭೆಯವರನ್ನು ನೋಡಿ, "ಮಹಾಸಭಾಸದರೆ! ಪ್ರಸ್ತುತ ಮುಖ್ಯ ವಿಷಯವೇನೆಂದರೆ, ನಮ್ಮ ರಾಜ್ಯದಲ್ಲಿ ಪೂರ್ವಿಕರಿಂದ ವಿಧಿಸಲ್ಪಟ್ಟು ಅಮಲಿನಲ್ಲಿದ್ದ ತೆರಿಗೆಗಳು ಹೆಸರಿಗೆ ಮಾತ್ರ ಈಗಲೂ ಇವೆ. ನಮ್ಮ ಮಹಾರಾಜರು ಕರುಣಾಮಯರೆಂದು ಖ್ಯಾತರಾಗಿದ್ದಾರೆ. ಇದು ನಿಮಗೆಲ್ಲಾ ಗೊತ್ತೇ ಇದೆ. ನಿಮಗೆ ಗೊತ್ತಾಗದಿರುವ ಸಂಗತಿಯೆಂದರೆ ನಾಮಮಾತ್ರವಾಗಿರುವ ಈ ಅಲ್ಪ ತೆರಿಗೆಯಿಂದ ಪ್ರಜಾಪಾಲನೆ ಹೇಗೆ ಸಾಧ್ಯವಾಗುತ್ತದೆಂಬುದೇ. ಆದೀಗ ನಮಗೂ ಒಂದು ತೀವ್ರ ಸಮಸ್ಯೆಯಾಗಿ ಕುಳಿತಿದೆ. ಅದಕ್ಕೊಂದು ಪರಿಹಾರ ಕಾಣಬೇಕಂತಲೇ ನಿಮ್ಮನ್ನೆಲ್ಲಾ ಕರೆಯಿಸಿ ಸಭೆ ಕೂಡಿಸಲಾಗಿದೆ." ಎಂದು ಹೇಳಿ ಎಂಜಲು ನುಂಗುವ ನೆವನದಲ್ಲಿ ಮಾತು ನಿಲ್ಲಿಸಿ, ಕೆನೆದು ಗಂಟಲು ಸರಿಪಡಿಸಿಕೊಂಡನು.

ಆಗ ಸಭೆಯಲ್ಲೊಬ್ಬನು ಎದ್ದು ನಿಂತು, "ಅಂದರೆ ಪ್ರಜೆಗಳ ಮೇಲೆ ತೆರಿಗೆ ಹಾಕದಿದ್ದರೆ ರಾಜ್ಯಪಾಲನೆ ಮಾಡಲು ಸಾಧ್ಯವೇ ಆಗದೇನು?" ಎಂದು ಪ್ರಶ್ನಿಸಿದನು. ಅವನಿಗೆ ಇದು ಆಶ್ಚರ್ಯ ವಿಷಯವೆನಿಸಿತೋ ಏನೊ! ಅವನ ಪ್ರಶ್ನೆ ಕೇಳಿ ಸಭೆಯಲ್ಲಿದ್ದವರು ಅವನನ್ನು ವಿಚಿತ್ರವಾಗಿ ನೋಡಿದರು. ಮಹಾಮಂತ್ರಿ ಪ್ರಶ್ನಿಸಿದವನನ್ನು ತೀಕ್ಷ್ಣವಾಗಿ ನೋಡಿ, ಹುಬ್ಬುಗಂಟಿಕ್ಕಿ, "ಹೇಗೆ ಸಾಧ್ಯವಾದೀತು? ನೀವೇ ಆಲೋಚಿಸಿ ನೋಡಿರಿ. ನಮ್ಮ ರಾಜ್ಯದಲ್ಲಿರುವ ಜನಸಂಖ್ಯೆ ಎಷ್ಟು? ಅಷ್ಟುಮಂದಿ ಸುಖವಾಗಿರಬೇಕಾದರೆ ಏನೇನು ಸೌಕರ್ಯಗಳಾಗಬೇಕು? ಇವರೆಲ್ಲರೂ ಆರೋಗ್ಯವಾಗಿರಬೇಕಾದರೆ ವೈದ್ಯರು ಬೇಡವೆ? ಔಷಧಗಳು ಬೇಡವೆ? ಚಿಕ್ಕಮಕ್ಕಳು




ಬೆಳೆದು ದೊಡ್ಡವರಾಗುವಾಗ ವಿದ್ಯೆಗಳು ಕಲಿಯ ಬೇಡವೇ? ನಡೆದಾಡಲು ಸಾರಿಗೆ ವ್ಯವಸ್ಥೆಗಳು ಆಗ ಬೇಡವೆ? ಇದೆಲ್ಲಾ ಒಂದು ಬದಿಗಿದ್ದರೆ ಪರರಾಜರು ಯಾವ ಕ್ಷಣದಲ್ಲಾದರೂ ನಮ್ಮ ಮೇಲೆ ದಾಳಿ ತೆಗೆದರೂ ತೆಗೆಯಬಹುದಷ್ಟೆ? ಅಂತಹ ದಾಳಿಗಳನ್ನು ನಿರೋಧಿಸಲಿಕ್ಕೆ ಸೈನ್ಯಗಳು ಸಿದ್ಧವಾಗಿರ ಬೇಡವೆ? ಅವರೆಲ್ಲರ ಬಲಕ್ಕೆ ತಕ್ಕ ಆಹಾರ ಬೇಡವೆ? ಆಯುಧಗಳು ಬೇಡವೇ? ಸಂಬಳ ವೇಡವೇ? ಅದಕ್ಕೆಲ್ಲಾ ರಾಜಭಂಡಾರ ತುಂಬಿರ ಬೇಡವೇ? ತೆರಿಗೆಯ ಮೂಲಕ ಹಣಬಾರದಿದ್ದರೆ ಬೇರೆ ಯಾವ ರೀತಿಯಾಗಿ ಬರುತ್ತದೆ? ನೀವೇ ಹೇಳಿರಿ. ಮುಖ್ಯವಾಗಿ ತೆರಿಗೆಯೆಂದರೇನು? ಅವುಗಳನ್ನು ಏಕೆ ವಿಧಿಸುತ್ತಾರೆ? ಎಂಬುದು ಪ್ರತಿ ಪೌರನಿಗೂ ಗೊತ್ತಿರಬೇಕು. ಅದನ್ನು ತಿಳಿಯದುದರಿಂದಲೇ ಹಾಗೆ ಕೇಳಿದಿರಿ..." ಎಂದು ಹೇಳುತ್ತಿರಲು ಚಿತ್ರಸೇನ ರಾಜನು, ತಾನೇನೋ ಮಾತಾಡಲಿರುವಂತೆ ಸೂಚಿಸಿದುದನ್ನು ನೋಡಿ ಮಂತ್ರಿ ಬಾಯಿಮುಚ್ಚಿ ಬದಿಗೆ ಸರಿದು ಸುಮ್ಮನಾದನು.

"ನಮ್ಮ ಮಹಾ ಮಂತ್ರಿಗಳು ಯಥಾರ್ಥವಾದುದನ್ನೇ ಹೇಳಿದ್ದಾರೆ. ಆದರೆ ಒಂದು ಸಾರಿ ತಗ್ಗಿಸಿದ ತೆರಿಗೆಯನ್ನು ಮತ್ತೆ ವಿಧಿಸಿಬಿಟ್ಟರೆ, ಮೊದಲಿನ ಮನೋಭಾವದಲ್ಲಿ ಪ್ರಜೆಗಳು ಕೊಡಬಲ್ಲರೇ, ನಾವಾದರೂ ವಸೂಲು ಮಾಡಲು ಸಾಧ್ಯವೇ ಎಂಬುದೊಂದು ಪ್ರಶ್ನೆ ಪ್ರತ್ಯೇಕವಾಗಿ ಏಳುತ್ತದೆ" ಎಂದಷ್ಟೇ ಹೇಳಿದನು ರಾಜ.

ಸಭೆಯೊಳಗೆ ಏನೋ ಗುಸುಗುಸುಗಳು ಎದ್ದುವು. ಯಾವನೋ ಒಬ್ಬನು ನಿರ್ಭಯದಿಂದ ಎದ್ದು ನಿಂತು, "ಮಹಾರಾಜರೇ, ಒಂದು ಸಾರಿ ತಗ್ಗಿಸಿದ ತೆರಿಗೆಗಳನ್ನು ಮತ್ತೆ ಹೆಚ್ಚಿಸುವ ವಿಷಯದಲ್ಲಿ ದುಡುಕಬಾರದೆಂದು ವಿಜ್ಞಾಪಿಸುತ್ತೇನೆ. ಇದು ಚೆನ್ನಾಗಿ ಯೋಚಿಸಬೇಕಾದ ವಿಷಯ. ಈಗಂತೂ ನಮ್ಮ ರಾಜ್ಯದಲ್ಲಿ ಮಾತ್ರವಲ್ಲದೆ ಪರರಾಜ್ಯಗಳಲ್ಲಿ ಕೂಡಾ ವ್ಯಾಪಿಸಿಕೊಂಡು ಹೋಗುವ ಪ್ರಭುಗಳ ಕೀರ್ತಿ, ಹೊಸ ತೆರಿಗೆಗಳನ್ನು ವಿಧಿಸಿಬಿಟ್ಟರೆ ಆರತಿ ಕರ್ಪೂರದ ಹಾಗೆ ಮಾಯವಾಗಿ ಹೋದೀತಲ್ಲ! ಮಹೀಪತಿಗಳು ಮಾತು ತಪ್ಪುವುದೆಂದರೆ ಸಾಮಾನ್ಯ ಸಂಗತಿಯಲ್ಲ!" ಎಂದನು.

ಈ ಎಚ್ಚರಿಕೆಯ ಮಾತು ರಾಜನಿಗೆ ಹೌದೆಂದೇ ತೋರಿತು. ತಾನು ಸಿಂಹಾಸನವೇರಿದಂದಿನಿಂದ ಈವರೆಗೂ ಆರ್ಜಿಸಿಕೊಂಡು ಬಂದಿರುವ ಯಶೋನಿಧಿ ಕ್ಷಣ ಮಾತ್ರದಲ್ಲಿ ಮಾಯವಾಗಿ ಹೋದೀತು! ಆದುದರಿಂದ ತಗ್ಗಿಸಿದ ತೆರಿಗೆಗಳನ್ನು ಎಷ್ಟು ಮಾತ್ರಕ್ಕೂ ಹೆಚ್ಚಿಸಬಾರದು. ಧನಾಗಾರವು ತುಂಬಿ ಬರಲು ಬೇರೇನಾದರೂ ದಾರಿಯಿದೆಯೋ ನೋಡಬೇಕು. ತೆರಿಗೆಯ ಮಾತೇ ಎತ್ತಬಾರದು. ಈ ಮಹಾ ಸಭೆಯಲ್ಲಿ ಅಂತಹ ಉಪಾಯ ಸೂಚಿಸಬಲ್ಲ ಮೇಧಾವಿ ಯಾವನೂ ಇರಲಾರನೆ!

ಹೀಗೆಂದುಕೊಂಡು ಚಿತ್ರಸೇನ ರಾಜನು, "ತೆರಿಗೆ ವಿಷಯದಲ್ಲಿ ಒಂದುಸಾರಿ ಮಾಡಿದ ನಿರ್ಣಯವನ್ನು ಬದಲಾಯಿಸುವ ಯೋಚನೆ ನಮಗಿಲ್ಲ. ಅದಲ್ಲದೆ ಹೊಸ ತೆರಿಗೆ ಹಾಕುವುದೆಂಬ ಮಾತಿಗೂ ಎಡೆ ಕೊಡ ಲಾರೆನು. ಇದಂತೂ ನಿಶ್ಚಯ! ಆದರೆ ಮಹಾ ಮಂತ್ರಿಯವರು ಪ್ರಸ್ತುತ ಪರಿಸ್ಥಿತಿಯನ್ನು ವಿವರಿಸಿ ದ್ದಾರೆ. ಆ ವಿಷಯದಲ್ಲಿ ಏನು ಮಾಡಿದರೆ ಚೆನ್ನಾಗಿ ರುತ್ತದೆಂದು ಸಭಿಕರಾದ ನೀವೇ ಆಲೋಚನೆ ಮಾಡಿ ಹೇಳಿರಿ!" ಎಂದನು.

ಇಡೀ ಸಭೆಯೇ ನಿಶ್ಶಬ್ದವಾಯಿತು. ಎಲ್ಲರೂ ಮುಖ ಮುಖ ನೋಡಿಕೊಳ್ಳುತ್ತಿದ್ದರೇ ಹೊರತು ಏನು ಉತ್ತರ ಕೊಡ ಬೇಕೆಂದು ಯಾರಿಗೂ ತೋರ ಲಿಲ್ಲ. ಎರಡು ನಿಮಿಷಗಳು ಹೀಗೆ ಕಳೆದ ಮೇಲೆ, ಬಲಿಷ್ಠನಾದೊಬ್ಬನು ಎದ್ದು ನಿಂತನು. ಸೇನಾಧಿಪತಿ ಯಾದ ಸಮರ ಸೇನನೇ ಅವನು. "ಮಹಾರಾಜರೇ, ಧನಾಗಾರವನ್ನು ತುಂಬಿಸುವ ವಿಷಯ ಅಂತಹ ದೊಡ್ಡ ಸಮಸ್ಯೆಯಾಗಿ ನನಗೆ ತೋರುವುದಿಲ್ಲ. ಅದಕ್ಕೆ ವೀರೋಚಿತವೂ, ರಾಜಧರ್ಮಕ್ಕೆ ಸಮ್ಮತವೂ, ಸುಲಭವೂ ಆದ ಉಪಾಯವನ್ನು ನಾನು ತಿಳಿಸ ಬಲ್ಲೆನು. ಆದರೆ ಅದು ಬಹಳ ಗುಪ್ತ ವಿಷಯ ವಾದುದರಿಂದ ಈ ಸಾರ್ವಜನಿಕ ಸಭೆಯಲ್ಲಿ ಹೇಳು ವುದು ಉಚಿತವಲ್ಲವೆಂದು ಭಾವಿಸುತ್ತೇನೆ. ಅಪ್ಪಣೆ ಯಾದರೆ ತಮ್ಮೊಂದಿಗೆ ಏಕಾಂತದಲ್ಲಿ ನನ್ನ ಆಲೋ ಚನೆಯನ್ನು ವಿಜ್ಞಾಪಿಸಿಕೊಳ್ಳುತ್ತೇನೆ" ಎಂದನು ಸೇನಾಧಿಪತಿ. ಇದಕ್ಕೆ ಒಪ್ಪಿಕೊಂಡವರಂತೆ, ಸೇನಾಧಿ ಪತಿಯಿಂದ ತಮ್ಮ ಭಾರ ನೀಗಿತೆಂಬ ಸಂತಸದಲ್ಲಿ ಸಭೆಯವರೆಲ್ಲಾ ಕರತಾಲ ಧ್ವನಿಯೆಬ್ಬಿಸಿದರು. ಆ ಮೇಲೆ ಚಿತ್ರಸೇನ ರಾಜನು ಸಭೆಯನ್ನು ಸಾಕು ಮಾಡಿ ಎದ್ದನು. ಸಭೆ ಚೆದರಿ ಎಲ್ಲರೂ ಹೊರಟು ಹೋದರು.

ಆ ದಿನ ರಾತ್ರಿ ಹತ್ತು ಗಂಟೆಯ ಹೊತ್ತಿನಲ್ಲಿ ಚಿತ್ರಸೇನ ರಾಜನು ಸಮರಸೇನನನ್ನು ಉದ್ಯಾನ ವನಕ್ಕೆ



ಕರೆಯಿಸಿದನು. ಅಲ್ಲಿ ಸಮರಸೇನನು ಮಹಾರಾಜ ನೊಂದಿಗೆ, "ಪ್ರಭುಗಳೇ, ನಮ್ಮ ಧನಾಗಾರದ ವಿಷಯದಲ್ಲಿ ಅಷ್ಟೆಲ್ಲಾ ಯೋಚಿಸಬೇಕಾದ ಅಗತ್ಯ ವಿಲ್ಲ. ಅದಕ್ಕಾಗಿ ನಮ್ಮ ರಾಜ್ಯದೊಳಗಂತೂ ಒಂದು ಚಿಕ್ಕಾಸುಕೂಡಾ ಹುಟ್ಟುವ ಹಾಗಿಲ್ಲ. ಹಾಗಾದರೆ ಬೇರೆ ದಾರಿ? ರಾಜ್ಯವು ರಾಮರಾಜ್ಯವಾಗಿ ಪ್ರಜೆಗಳು ಹೇಗೆ ಶಾಶ್ವತ ಸುಖವನ್ನು ಹೊಂದಬಲ್ಲರು? ಇದು ತಾನೇ ತಮ್ಮ ಸಮಸ್ಯೆ? ಇದಕ್ಕಾಗಿ ನನಗೆ ಕಾಣುವ ಒಂದೇ ಒಂದು ಮಾರ್ಗ ಯಾವುದೆಂದರೆ, ನಾವು ಪರ ರಾಜ್ಯಗಳ ಮೇಲೆ ದಾಳಿಮಾಡಿ ಅಲ್ಲಿಯ ಧನಾಗಾರ ಗಳನ್ನು ದೋಚಿಕೊಂಡು ಬರಬೇಕು. ಈ ಪದ್ಧತಿ ರಾಜ ಧರ್ಮಗಳಲ್ಲಿ ಒಂದು ತಾನೇ? ಈ ಬಗೆಯ ಅಗತ್ಯಗಳಿಗಾಗಿಯೇ ಸೇನಾಧಿಪತಿಗಳನ್ನೂ ಸೇನೆ ಗಳನ್ನೂ ರಾಜರು ಪೋಷಿಸುತ್ತಾರೆ. ಇದರಲ್ಲಿ ಯಾವ ತಪ್ಪೂ ಇಲ್ಲವೆಂಬುದು ನನ್ನ ಅಭಿಪ್ರಾಯ" ಎಂದು ಬಿನ್ನವಿಸಿಕೊಂಡನು.



ಬೇಕಾಗುತ್ತದೆ. ಅದಕ್ಕೆ ನಿನಗೆ ರಾಜಾಜ್ಞೆ ಬೇಕಷ್ಟೆ? ಇಕೋ, ಈ ಮುದ್ರಿಕೆಯನ್ನು ಉಪಯೋಗಿಸಿಕೊಂಡು ಕಾರ್ಯ ಸಾಧಿಸು" ಎಂದು ರಾಜನು ತನ್ನ ಬೆರಳಲ್ಲಿದ್ದ ರಾಜ ಮುದ್ರಿಕೆಯನ್ನು ತೆಗೆದು ಸೇನಾನಾಯಕನಿಗೆ ಕೊಟ್ಟನು. ಆಗ ರಾಜನಿಗೆ ದೊಡ್ಡದೊಂದು ಭಾರ ವನ್ನು ಕಳಗಿಳಿಸಿದಷ್ಟು ನೆಮ್ಮದಿಯುಂಟಾಗಿತ್ತು.

ಸೇನಾನಾಯಕ ಸಮರಸೇನನು ರಾಜನ ಬಳಿ ಯಿಂದ ಅಪ್ಪಣೆಪಡೆದುಕೊಂಡು ಹೋಗಿ, ಸೈನ್ಯದ ಎಲ್ಲಾ ದಳನಾಯಕರನ್ನೂ ಸಮಾವೇಶಗೊಳಿಸಿ, ಅವ ರೊಂದಿಗೆ, ರಾಜನಿಗೂ ತನಗೂ ಆದ ಸಂಭಾಷಣೆ ಗಳನ್ನು ವಿವರಿಸಿದನು. ಕಡೆಗೆ "ಇದೆಲ್ಲಾ ಚೆ[illegible]. ಒಂದೇ ಒಂದು ಸಂದೇಹ ನನ್ನನ್ನು ಬಾಧಿಸುತ್ತಿದೆ" ಎಂದನು ಸಮರಸೇನ.

ಅದೇನು ಸಂದೇಹವೆಂದು ದಳನಾಯಕರು ಕೇಳಲು, "ಅದು ಕೂಡಾ ಮುಖ್ಯವಾದುದೇ. ನಾವು ನಮ್ಮ ಸೈನಿಕರನ್ನೆಲ್ಲಾ ಕರೆದುಕೊಂಡು ಸುತ್ತು ಮುತ್ತಲಿನ ದ್ವೀಪರಾಜ್ಯಗಳ ಮೇಲೆ ದಂಡಯಾತ್ರೆ ಹೋಗುತ್ತೇವೆ. ನಮ್ಮ ಉದ್ದೇಶ ಅಲ್ಲಿಯ ಧನಾಗಾರ ಗಳನ್ನು ಕೊಳ್ಳೆ ಹೊಡೆಯುವುದು ಮಾತ್ರವೇ. ನಾವೇನೂ ಆ ದ್ವೀಪರಾಜ್ಯಗಳನ್ನು ಆಕ್ರಮಿಸಿ ಆಳಿಕೆ ನಡೆಯಿಸಲು ಹೋಗುವುದಿಲ್ಲ. ಇಷ್ಟೊಂದು ಸಣ್ಣ ಕೆಲಸಕ್ಕೆ ಈಗ ನಮಗಿರುವ ಸೈನಿಕರೇ ಸಾಕೆಂದು ತೋರುತ್ತದೆ. ಆದರೆ ನಾವು ಇಲ್ಲಿರುವ ಎಲ್ಲಾ ಸೇನೆ ಯನ್ನೂ ಸಾಗಿಸಿಕೊಂಡು ಹೋಗಿಬಿಟ್ಟರೆ, ಅವಕಾಶ ವನ್ನು ಹೊಂಚುಹಾಕಿಕೊಂಡಿರುವ ದ್ರೋಹಿಗಳಾ ರಾದರೂ ಪ್ರಜೆಗಳನ್ನು ಕೆರಳಿಸಿ ತಿರುಗಿ ಬೀಳುವಂತಹ ಬಂಡಾಯವೇನಾದರೂ ಎಬ್ಬಿಸಬಹುದು. ಆಗ ನಮ್ಮ ಮಹಾರಾಜರನ್ನೂ, ರಾಜ ಕುಟುಂಬವನ್ನೂ ರಕ್ಷಿಸುವವರು ಯಾರು? ಇದೊಂದು ಮುಖ್ಯ ಪ್ರಶ್ನೆಯಲ್ಲವೆ?" ಎಂದನು ಸೇನಾಧಿಪತಿ. "ಹೌದು ಇದೊಂದು ಸಿಕ್ಕು ಸಮಸ್ಯೆಯೇ ನಿಜ. ಸೈನ್ಯವಿಲ್ಲದ

ಚಿತ್ರಸೇನನು ಸ್ವಲ್ಪಹೊತ್ತು ಆಲೋಚನೆ ಮಾಡಿ, "ಅದು ಸರಿಯೇ! ನಿನ್ನ ಆಲೋಚನೆ ಚೆನ್ನಾಗಿಯೇ ಇದೆ. ಆದರೆ ಇದರಲ್ಲಿರುವ ತೊಂದರೆಯನ್ನು ನೀನು ಗಮನಿಸಿದಂತೆ ಕಾಣುವುದಿಲ್ಲ. ಅಸಲು ನಮ್ಮ ಕುಂಡಲಿನಿ ರಾಜ್ಯವೆಂಬುದು ದ್ವೀಪರಾಜ್ಯತಾನೆ? ನಮಗೆ ನಾಲ್ಕು ದಿಕ್ಕುಗಳಲ್ಲಿಯೂ ಸಮುದ್ರವೇ ಇದೆ. ಈ ಸಮುದ್ರಗಳನ್ನೆಲ್ಲ ದಾಟಿಕೊಂಡು ಹೋಗಿ, ನೆರೆ ರಾಜ್ಯಗಳ ಮೇಲೆ ದಾಳಿ ಮಾಡಬೇಕಾದರೆ ನಮಗೆ ತುಂಬಾ ನೌಕೆಗಳೂ, ಸೈನಿಕರೂ ಬೇಕಾಗುತ್ತದೆ. ಈ ವಿಷಯವನ್ನು ನೀನು ಮರೆತಹಾಗಿದೆ" ಎಂದನು.

"ಆ ನೌಕಾಬಲ ಸೈನಿಕ ಬಲಗಳ ವಿಷಯ ಆಲೋಚಿಸಿದ್ದೇನೆ. ಆ ಸಂಗತಿಯನ್ನು ನನಗೇ ಬಿಟ್ಟು ಬಿಡಿ" ಎಂದನು ಸೇನಾಧಿಪತಿ ಸಮರಸೇನ. "ಭೇಷ್! ಹಾಗಾಗಾದರೆ ಸರಿ. ಆ ಬಾಧ್ಯತೆ ಪೂರಾ ನಿನ್ನದೇ. ನಮ್ಮ ಸೈನಿಕರನ್ನು ಹೆಚ್ಚಿಸಲು. ಎಷ್ಟೋ ಮಂದಿ ಹೊಸಬರನ್ನು ಸೈನ್ಯದಲ್ಲಿ ಸೇರಿಸಿಕೊಳ್ಳ

ರಾಜನು ಸುಟ್ಟ ಕಡ್ಡಿಗೆ ಸಮ ಅನ್ನುತ್ತಾರೆ." ಎಂದನೊಬ್ಬ ದಳನಾಯಕ.

ಸೇನಾನಿ ಸಮರಸೇನನು ಏನೋ ಹೇಳಲು ನೋಡುವಾಗ, ಒಬ್ಬ ಮುದುಕ ಯೋಧನು ದೊಡ್ಡ ಕಂಠದಿಂದ, "ಸೇನಾಧಿಪತಿಯೇ! ಕುಂಡಲಿನೀ ದೇವಿಯ ಕರುಣೆಯಿಂದ ನನಗೊಂದು ಒಳ್ಳೆಯ ಆಲೋಚನೆ ಹೊಳೆಯುತ್ತದೆ. ಹೇಳಲೆ?" ಎಂದನು.

"ಹೇಳಯ್ಯಾ!" ಎಂದರು ಎಲ್ಲರೂ ಒಮ್ಮೆಗೇ.

"ಕೇಳಿರಿ ಹಾಗಾದರೆ. ದೇಶದಲ್ಲಿ ಬಂಡಾಯ ದಂತಹುದೇನಾದರೂ ಕೆರಳಿ ಏಳಬೇಕಾದರೆ ಅದಕ್ಕೆಲ್ಲಾ ಕಾರಣರು ಯುವಕರೇ. ಆದುದರಿಂದ ನಾವು ದೇಶ ದೊಳಗಿನ ಯುವಕರನ್ನೆಲ್ಲಾ ಯಾವುದೋ ಒಂದು ವಿಧದಲ್ಲಿ ಆಕರ್ಷಿಸಿ ಸೈನ್ಯದಲ್ಲಿ ಸೇರಿಸಿಕೊಂಡುಬಿಡ ಬೇಕು. ಇದೇ ಉತ್ತಮ ಮಾರ್ಗವಾಗಿದೆ." ಎಂದನು ವೃದ್ಧಯೋಧ.




ಈ ಉಪಾಯವು ಸಮರಸೇನನಿಗೂ, ಅಲ್ಲಿ ಸೇರಿದ ಇತರರಿಗೂ ಚೆನ್ನಾಗಿ ಹಿಡಿಸಿತು. ಆಗಲೇ ಚರ್ಚಿಸಿ ಅದಕ್ಕೆ ತಕ್ಕ ಪಥಕವನ್ನು ಹಾಕಿಕೊಂಡರು. ರಾಜ್ಯ ದೊಳಗೆ ಹದಿನೈದರಿಂದ ನಲುಪತ್ತು ವಯಸ್ಸಿನವರೆಗೆ ಇರುವ ಮಧ್ಯಮ ವಯಸ್ಸಿನವರೆಲ್ಲಾ ಸೈನ್ಯದಲ್ಲಿ ಸೇರ ತಕ್ಕದ್ದೆಂದು ರಾಜಾಜ್ಞೆಯನ್ನು, ರಾಜ ಮುದ್ರಿಕೆಯ ಸಹಾಯದಿಂದ ಎಲ್ಲಾ ಪ್ರಜೆಗಳಿಗೂ ಸಿಗುವ ಹಾಗೆ ಹೊರಡಿಸಲಾಯಿತು,

ಮರುದಿನವೇ ಸೈನಿಕರು ಆಜ್ಞಾ ಪತ್ರಗಳನ್ನು ತೆಗೆದುಕೊಂಡು ಪ್ರತಿ ಗ್ರಾಮಕ್ಕೂ ಹೋಗಿ, ಅಲ್ಲಲ್ಲಿ ಪ್ರಾಯ ತುಂಬಿದ್ದವರನ್ನು ಸೈನ್ಯದಲ್ಲಿ ಸೇರಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದರು. ಆಗ ಕೆಲವರು ಸೈನ್ಯದಲ್ಲಿ ಸೇರಲು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತ, "ಅಯ್ಯಾ, ಬೇಕಾದರೆ ರಾಜರ ಹತ್ತಿರ ಹೊಸ ತೆರಿಗೆ ಹಾಕಲು ಹೇಳಿರಿ. ಸಂತೋಷವಾಗಿ ಕೊಡುತ್ತೇವೆ. ಅಷ್ಟೇ ಹೊರತು ಯಾವುದೋ ಪರದೇಶಗಳ ಮೇಲೆ ದಾಳಿಗಾಗಿ ನಮ್ಮನ್ನು ಒತ್ತಾಯಿಸಿ ಸೈನ್ಯದಲ್ಲಿ ಸೇರಿಸಿ ಕೊಳ್ಳಬಾರದು, ತಂದೆ ತಾಯಿಗಳಿಂದಲೂ, ಹೆಂಡತಿ ಮಕ್ಕಳಿಂದಲೂ ನಮ್ಮನ್ನು ಬೇರ್ಪಡಿಸ ಬೇಡಿ ರಯ್ಯಾ!" ಎಂದು ದೈನ್ಯತೆಯಿಂದ ಮೊರೆಯಿಟ್ಟು ಕೊಂಡರು.

ಆಜ್ಞಾ ಪತ್ರಗಳನ್ನು ಅಂಥವರ ಮುಖಕ್ಕೆ ಹಿಡಿದು ಸೈನಿಕರು, "ಇದು ರಾಜಾಜ್ಞೆ, ನೋಡಿದಿರಾ?" ಎನ್ನುತ್ತ ಸಂತೋಷದಿಂದ ಸೇರುವವರನ್ನು ಮರ್ಯಾದೆಯಿಂದಲೂ, ಉಳಿದವರನ್ನು ಬಲವಂತ ದಿಂದ ಕೈ ಕಾಲು ಕಟ್ಟಿ ಡೋಲಿಗಳಲ್ಲಿ ಹೊತ್ತು ಕೊಂಡೂ ನಗರಕ್ಕೆ ಒಯ್ದರು.

ಈ ಬಗೆಯ ಬಲವಂತದ ಸೈನಿಕ ಕೆಲಸದ ಮೇಲೆ ಇಷ್ಟವಿಲ್ಲದವರು ಕೆಲವರು, ಸೈನಿಕರ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡು ಹೋಗಿ, ಚಿತ್ರಸೇನರಾಜನೊಂದಿಗೇ ಇದು ಸರಿಯಲ್ಲವೆಂದು ಮೊರೆಯಿಟ್ಟುಕೊಂಡರು. ಚಿತ್ರಸೇನರಾಜನು ಅವರು ಹೇಳುವುದನ್ನೆಲ್ಲಾ ನೆಮ್ಮದಿ

ಯಾಗಿ ಕೇಳಿ. "ನಿಮ್ಮಲ್ಲಿ ಕೆಲವರು ನನ್ನ ಕೀರ್ತಿಯನ್ನು ಸಾವಿರ ಬಾಯಿಗಳಿಂದ ಹೊಗಳುವಿರಿ. ಕಾವ್ಯ ಹೆಣೆಯುವಿರಿ. ಹಾಗಿರುವಾಗ ನಾನು ತೆರಿಗೆಗಳನ್ನು ಏರಿಸಿ ಬಿಟ್ಟರೆ ನೀವೆಲ್ಲಾ ನನ್ನ ಮೇಲೆ ಬೈಗುಳು ಪದ್ಯಗಳನ್ನು ಹಾಡುವವರಾಗುವಿರಿ. ಅಂದರೆ ನಾನೇ ನಿಮಗೆ ಅದಕ್ಕೂ ಎಡೆಮಾಡಿಕೊಟ್ಟವನಾಗುತ್ತೇನೆ. ಹೇಳಿದ ಮಾತನ್ನು ನಡೆಸುವುದೇ ನಮ್ಮ ವಂಶಾಚಾರ! ತೆರಿಗೆ ತಗ್ಗಿಸುವುದಾಗಿ ಹೇಳಿ ಹಾಗೇ ಮಾಡಿದೆ: ಈಗ ದಾಳಿ ತೆಗೆದು ದೋಚಬೇಕೆಂದು ಹೇಳಿದೆ. ಹಾಗೆಯೇ ಮಾಡುವೆನು. ಪ್ರಜೆಗಳಾದ ನೀವೂ ಅದಕ್ಕೆ ಒಳಪಡಲೇಬೇಕು" ಎಂದನು.

ಅಂತೂ ಸೈನಿಕರ ಶೇಖರಣೆ ಬೇಗದಲ್ಲೇ ಮುಗಿಯಿತು ಒಂದು ಶುಭ ಮುಹೂರ್ತದ ದಿನ ಕುಂಡಲಿನೀ ಸೈನ್ಯಗಳು ಹಡಗುಗಳನ್ನೇರಿದುವು. "ಇನ್ನು ಹೊರಡಿರಿ, ವಿಜಯಶಾಲಿಗಳಾಗಿ ಬನ್ನಿರಿ!" ಎಂದು ಚಿತ್ರಸೇನನು ಆಜ್ಞೆ ಮಾಡಿದ ಅದೇಕ್ಷಣದಲ್ಲಿ, ದಕ್ಷಿಣ ದಿಕ್ಕಿನ ಆಕಾಶದಲ್ಲಿ ಕಣ್ಣು ಕೋರೈಸುವಂತಹ ಒಂದು ಪ್ರಕಾಶ ತೋರಿತು. ಮಹಾ ವೇಗದಿಂದ ಕದಲುವ ಆ ಪ್ರಕಾಶವು ಒಂದು ಬಾಲದ ನಕ್ಷತ್ರ! ಧೂಮಕೇತು! ಅದನ್ನು ನೋಡಿ ಎಲ್ಲರೂ ಭಯದಿಂದ ನಡುಗುತ್ತ, "ಅಶುಭ! ಅಶುಭ!" ಎಂದು ಕೂಗಿಕೊಂಡರು.

ರಾಜನ ಬದಿಯಲ್ಲೇ ಇದ್ದ ಆಸ್ಥಾನದ ಜ್ಯೋತಿಷ್ಕನು, "ಈ ಧೂಮಕೇತು ಆಪದವನ್ನು ಸೂಚಿಸುವಂಥಾದ್ದು. ಹಡಗುಗಳು ಹೊರಡದಂತೆ ನಿಲ್ಲಿಸಿರಿ. ಇನ್ನೊಂದು ಒಳ್ಳೆಯ ಮುಹೂರ್ತವನ್ನು ನೋಡೋಣ!" ಎಂದನು.

ಆ ಮಾತು ಕೇಳಿ ಸಮರಸೇನನು ಕೋಪಗೊಂಡು, "ಇಂತಹ ಅರ್ಥವಿಲ್ಲದ ಹುಚ್ಚು ನಂಬುಗೆಗಳಿಂದಲೇ ಕೆಲಸ ಕೆಡುವುದು. ಈಗ ತಡೆದು ಚಂಡ ಪ್ರಚಂಡ ಉತ್ಸಾಹದಲ್ಲಿರುವ ಸೈನಿಕರನ್ನು ನಿರುತ್ಸಾಹಪಡಿಸದಿರಿ, ಈ ಧೂಮಕೇತುವಿಗೂ ನಮ್ಮ ಸೈನಿಕರಿಗೂ ಏನು ಸಂಬಂಧ?" ಎಂದನು.

ಆಸ್ಥಾನ ಜ್ಯೋತಿಷ್ಕನು ಎಷ್ಟೋ ಹೇಳಿ ನೋಡಿದನು. ಸೇನಾಧಿಪತಿ ಮುಂದಿಟ್ಟ ಅಡಿಯನ್ನು ಹಿಂದಿಡುವುದೇ ಅಪಶಕುನವೆಂದು ಗಟ್ಟಿಯಾಗಿ ಪಟ್ಟು ಹಿಡಿದನು. ಚಿತ್ರಸೇನ ಮಹಾರಾಜನೂ ಸೇನಾಧಿಪತಿಯ ವಾದವನ್ನೇ ಬಲಪಡಿಸಿದನು. ನಿರುಪಾಯನಾಗಿ ಜೋತಿಷ್ಕನು ಸುಮ್ಮನಾದನು.

ಸೇನಾಧಿಪತಿ ಸಮರಸೇನನ ಆಜ್ಞೆಯಿಂದ ಹಡಗುಗಳ ಹಾಯಿಗಳು ಬಿಡಿಸಿಕೊಂಡುವು. ಯುದ್ಧ ಹಡಗುಗಳು ದಕ್ಷಿಣ ದಿಕ್ಕಿನಲ್ಲಿ ಕಾಣುವ ಧೂಮಕೇತುವಿಗೆ ಅಭಿಮುಖವಾಗಿ ಹೊರಟುವು.

—(ಇನ್ನೂ ಇದೆ)





# ಪರಮತ್ಯಾಗ

ಅಮಾನುಷ ಶಕ್ತಿಯುಳ್ಳ ಭೂತಬೇತಾಳಗಳನ್ನು ಬೆರಗುಪಡಿಸುವಷ್ಟು ಸಾಹಸಿಯಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲಿನ ಮೇಲೆ ಹೊತ್ತುಕೊಂಡು, ಎಂದಿನಂತೆ ಮೌನದಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ ! ನೀನೇನೋ ಅಚ್ಚಸ್ವಾಮಿ ಭಕ್ತನಂತೆ ಯಾರಿಗಾಗಿಯೋ ಈ ಸೇವೆಯನ್ನು ಮಾಡುತ್ತಿರುವಿ. ಆದರೆ ಸಾಧಾರಣವಾಗಿ ಮನುಷ್ಯರು ಸೇವಕರು ಮಾಡುವ ಸೇವೆಗೆ ತಕ್ಕ ಗೌರವ ಕೊಡುವರೋ ಎಂಬುದು ಸಂದೇಹವೇ. ಹಾಗಿರುವಾಗ ಕೊಟ್ಟರೂ ಬೇಡೆಂದರೆ ಏನಾದೀತೆಂಬುದಕ್ಕೆ ದಯಾನಿಧಿಯ ತ್ಯಾಗವೊಂದು ಉದಾಹರಣೆಯಾಗಿದೆ. ನಿನಗೆ ದಾರಿಯ ಶ್ರಮ ಗೊತ್ತಾಗದಂತೆ ಆ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ನಡೆ" ಎಂದು ಕಥೆ ಹೇಳಲು ಪ್ರಾರಂಭಿಸಿತು :

ಕಳಿಂಗ ದೇಶದ ರಾಜನಾದ ಮಾರ್ತಾಂಡನ ಸೇನೆಯಲ್ಲಿ ದಯಾನಿಧಿ ಎಂಬವನು ಒಬ್ಬ ದಳಪತಿಯಾಗಿ

## ಬೇತಾಳಕಥೆಗಳು?..



ದ್ದನು. ಅವನ ವೀರಧೀರ ಪರಾಕ್ರಮಗಳನ್ನು ನಿರೂಪಿಸುವಂತಹ ಸಂದರ್ಭಗಳೇನೂ ಬಂದಿರಲಿಲ್ಲ. ಆದರೆ ಅವನು ಮನಸ್ಸಿನಲ್ಲಿ ಯಾವಾಗಲೂ ಯುದ್ಧ ತಂತ್ರಗಳನ್ನು ಕುರಿತೇ ಆಲೋಚಿಸಿಕೊಂಡಿರುವನು.

ಒಂದು ದಿನ ಮಾರ್ತಾಂಡ ರಾಜನು ಭಾರೀ ಎತ್ತುಗಡೆಯ ಕೋಲಾಹಲದಿಂದ ದೂರದ ಅರಣ್ಯಗಳಲ್ಲಿ ಬೇಟೆಯಾಡಲು ಹೊರಟನು. ಆಗ ದಯಾನಿಧಿಯನ್ನು ಕೋಟೆಯ ರಕ್ಷಣೆಗಾಗಿ ನಿಯಮಿಸಿದನು. ಈ ಸುದ್ದಿ ಗೂಢಚಾರರ ಮೂಲಕವಾಗಿ, ಕಾದುಕೊಂಡಿದ್ದ ಶತ್ರು ರಾಜನಿಗೆ ತಿಳಿಯಿತು. ದೊಡ್ಡ ದೊಡ್ಡ ವೀರ ನಾಯಕರೆಲ್ಲ ಬೇಟೆಗೆ ಹೋದುದರಿಂದ, ಕೋಟೆಗೆ ಒಳ್ಳೆಯ ರಕ್ಷಣೆ ಇಲ್ಲವೆಂದು ತಿಳಿದು, ವೀರವರ್ಮನೆಂಬ ಆ ಶತ್ರು ರಾಜನು ಆಕಸ್ಮಿಕವಾಗಿ ದಂಡೆತ್ತಿ ಬಂದನು. ಇಂತಹ ಪರಿಸ್ಥಿತಿ ಬಂದರೆ ಏನು ಮಾಡಬೇಕೆಂದು ಮೊದಲೇ ಆಲೋಚಿಸಿಟ್ಟುಕೊಂಡಿದ್ದ ದಯಾನಿಧಿ, ಕೋಟೆಯ ರಕ್ಷಣೆಗಾಗಿ ಇರಿಸಿದ ಸೈನಿಕರನ್ನೆಲ್ಲಾ ಕೋಟೆಯ ಗೋಡೆಯ ಮೇಲೇರಿಸಿದನು. ಅವರ ಜತೆಗೆ ಇತರ ಯುವಕರನ್ನೂ ಏರಿಸಿದನು. ಅವರೆಲ್ಲಾ ಶತ್ರು ಸೈನಿಕರ ಮೇಲೆ ಆಯುಧಗಳನ್ನೂ, ಕಲ್ಲುಗಳನ್ನೂ, ಬೆಂಕಿಯನ್ನೂ, ದೊಂದಿಯ ಬಾಣಗಳನ್ನೂ ಪ್ರಯೋಗಿಸಿ ಶತ್ರುಗಳಿಗೆ ಮಹಾ ಬೀಭತ್ಸವನ್ನುಂಟು ಮಾಡಿದರು. ಅಳಿದುಳಿದ ಶತ್ರು ಸೈನಿಕರೆಲ್ಲಾ ದಿಕ್ಕಾಪಾಲಾಗಿ ಓಡಿಹೋದರು. ಗಾಯಗೊಂಡವರು ಕೋಟೆಯ ಹೊರಭಾಗದಲ್ಲಿ ಬಿದ್ದು ನರಳುತ್ತಿದ್ದರು. ದಯಾನಿಧಿ ಸತ್ತುಹೋದ ಶತ್ರು ಸೈನಿಕರನ್ನು ಹುಗಿಸಿ, ಗಾಯಗೊಂಡವರನ್ನು ಕೋಟೆಯೊಳಗೆ ಸಾಗಿಸಿ ಚಿಕಿತ್ಸೆಗೆ ಏರ್ಪಾಡು ಮಾಡಿಸಿದನು.

ಹೀಗೆ ತನ್ನ ನಗರದ ಕೋಟೆಯ ಮೇಲೆ ಶತ್ರುವಾದ ವೀರವರ್ಮನು ದಾಳಿಮಾಡಿದ ಸಮಾಚಾರ ಬೇಟೆಗೆ ಹೋದ ರಾಜನಿಗೆ ಗೊತ್ತಾಯಿತು. ಅವನು ಕೂಡಲೇ ಹಿಂದಿರುಗಿ ಬಂದು, ದಯಾನಿಧಿ ಸಾಧಿಸಿದ ಮಿಂಚಿನ ವಿಜಯದ ಸಂಗತಿ ತಿಳಿದು ತುಂಬಾ ಮೆಚ್ಚಿಕೊಂಡನು. ಆದರೆ ಶತ್ರು ಸೈನಿಕರಿಗೆ ಅವನು ಚಿಕಿತ್ಸೆ ಮಾಡಿಸುವುದು ಮಾತ್ರ ಮಾರ್ತಾಂಡ ರಾಜನಿಗೆ ಮೆಚ್ಚಿಗೆಯಾಗಲಿಲ್ಲ. ಅವನು ಅವರಿಗೆಲ್ಲಾ ಮರಣ ದಂಡನೆ ವಿಧಿಸಿ ಕೊಲ್ಲಿಸಿಬಿಟ್ಟನು.

ಮಾರ್ತಾಂಡರಾಜನ ಕೋಪವು ಅಷ್ಟಕ್ಕೆ ತೀರಲಿಲ್ಲ. ಅವನು ತನ್ನ ಎಲ್ಲಾ ಸೇನೆಯನ್ನೂ ಸೇರಿಸಿಕೊಂಡು ವೀರವರ್ಮನ ಮೇಲೆ ಯುದ್ಧಕ್ಕೆ ಹೋದನು. ಹೀಗಾದೀತೆಂದು ಮೊದಲೇ ಊಹಿಸಿಕೊಂಡಿದ್ದ ವೀರವರ್ಮನು ನೆರೆಕರೆಯ ತನ್ನ ಮಿತ್ರ ರಾಜರನ್ನೆಲ್ಲಾ ಸಹಾಯಕ್ಕೆ ಕರೆದು ಬಲು ದೊಡ್ಡ ಬಳಗಗಳೊಂದಿಗೆ ಮಾರ್ತಾಂಡನ ಸೇನೆಗಳನ್ನು ಮಣ್ಣು ಮುಕ್ಕುವಂತೆ ಸೋಲಿಸಿ, ಮಾರ್ತಾಂಡನನ್ನೇ ಸೆರೆಹಿಡಿದು ಬಂದೀಖಾನೆಯಲ್ಲಿಟ್ಟನು. ಉಳಿದ ಯುದ್ಧ ಖೈದಿಗಳಿಂದ ಗುಲಾಮಚಾಕರಿ ಮಾಡಿಸಲು ಹಚ್ಚಿದನು. ಅಷ್ಟು ಮಾತ್ರವಲ್ಲದೆ ವೀರವರ್ಮನ ಸೈನಿಕರು ಸ್ವೇಚ್ಛೆ

ಯಾಗಿ ಕಳಿಂಗ ನಗರವನ್ನೇ ಕೊಳ್ಳೆಹೊಡೆದರು; ದಯಾನಿಧಿ ಹೇಗೋ ತಪ್ಪಿಸಿಕೊಂಡು ನಗರದ ಒಂದು ಮೂಲೆಯಲ್ಲಿ ಸಾಧಾರಣ ಪ್ರಜೆಯಂತೆ ರಹಸ್ಯವಾಗಿ ದಿನ ದೂಡಿಕೊಂಡಿದ್ದನು.

ವೀರವರ್ಮನು ಸಾಧಿಸಿದ ವಿಜಯವು ಕಳಿಂಗದ ಪ್ರಜೆಗಳಿಗೆ ಪ್ರಾಣಾಂತಕವೇ ಆಯಿತು. ಅವರಿಗೆ ನೆಮ್ಮದಿಯೇ ಇರಲಿಲ್ಲ. ಎಲ್ಲಿ ನೋಡಿದರೂ ಸೈನಿಕರು ಕೊಳ್ಳೆಹೊಡೆಯುವುದರಲ್ಲೇ ಮಗ್ನರಾಗಿದ್ದರು. ವೀರವರ್ಮನು ಕಳಿಂಗವನ್ನು ಶತ್ರು ನಗರವೆಂದೇ ನೋಡುತ್ತಿದ್ದನು.

ಇದನ್ನು ನೋಡಿ ದಯಾನಿಧಿಗೆ ಸಹಿಸಲಾಗಲಿಲ್ಲ. ಅವನು ಕೆಲವು ಮಂದಿ ಧೈರ್ಯಸಾಹಸಿಗಳಾದ ಯುವಕರನ್ನು ಒಂದುಗೂಡಿಸಿ ರಹಸ್ಯವಾಗಿ ಬಲವರ್ಧನೆ ಮಾಡಿಕೊಂಡು, ಒಂದು ಯೋಜನೆ ಸಿದ್ಧ ಮಾಡಿದನು. ಆ ಪ್ರಕಾರ ಒಂದು ದಿನ ರಾತ್ರಿ ಅಕಸ್ಮಾತ್ತಾಗಿ ರಾಜ ಭವನದೊಳಗೆ ತಿರುಗಿಬಿದ್ದು ವೀರವರ್ಮನನ್ನೂ, ಇತರ ಮುಖ್ಯ ಮುಖ್ಯ ಅಧಿಕಾರಿಗಳನ್ನೂ ಅತಿ ಸುಲಭವಾಗಿ ಸೆರೆಹಿಡಿಸಿಬಿಟ್ಟನು. ಅದೇ ವೇಗದಲ್ಲಿ ಮಾರ್ತಾಂಡ ರಾಜನನ್ನು ಸೆರೆಮನೆಯಿಂದ ಬಿಡುಗಡೆಯೂ ಮಾಡಿಸಿದನು.

ತಮ್ಮ ರಾಜನು ಸೆರೆಮನೆಯಿಂದ ಹೊರಬಿದ್ದುದನ್ನು ನೋಡಿ, ಕಳಿಂಗ ನಗರವಾಸಿಗಳು ಬಂಡಾಯವೆದ್ದು ತಮ್ಮನ್ನು ಪೀಡಿಸುವ ಶತ್ರು ಸೈನಿಕರೇ ಮೊದಲಾದವರನ್ನೆಲ್ಲಾ ಹಿಡಿದು ಹೊಡೆದು ಮಣ್ಣು ಮುಕ್ಕಿಸಿದರು.

ಮಾರ್ತಾಂಡನು ಮತ್ತೆ ಸಿಂಹಾಸನದ ಮೇಲೆ ಕುಳಿತು ವೀರವರ್ಮನಿಗೆ ಶಿರಚ್ಛೇದವನ್ನೂ, ಅವನ ಕೆಳಗಿನ ಅಧಿಕಾರಿಗಳಿಗೆಲ್ಲ ಗಲ್ಲಿನ ಶಿಕ್ಷೆಯನ್ನೂ ವಿಧಿಸಿದನು. ಹೀಗೆ ಶಿಕ್ಷೆಗಳನ್ನು ಜ್ಯಾರೀ ಮಾಡಿದ ಸಭೆಯಲ್ಲಿಯೇ ಮಾರ್ತಾಂಡನು ದಯಾನಿಧಿ ತೋರಿಸಿದ ನೈಪುಣ್ಯತೆಗಳನ್ನು ಬಹಳವಾಗಿ ಮೆಚ್ಚಿ



ಕೊಂಡು, ಅವನನ್ನು ಬೇಗದಲ್ಲಿಯೇ ಸರ್ವ ಸೇನಾನಾಯಕನನ್ನಾಗಿ ನಿಯಮಿಸುತ್ತೇನೆಂದು ಪ್ರಕಟಪಡಿಸಿದನು. ಆ ದಿನ ರಾತ್ರಿ ದಯಾನಿಧಿ ಏಕಾಂತದಲ್ಲಿ ಮಾರ್ತಾಂಡ ರಾಜನನ್ನು ಸಂಧಿಸಿ, "ಮಹಾರಾಜರೇ, ನೀವು ನನಗೆ ಕೊಡಲಿರುವ ಸರ್ವ ಸೇನಾಧಿಪತಿ ಪದವಿಯನ್ನು ನಿರಾಕರಿಸುತ್ತೇನೆಂಬುದನ್ನು ಕ್ಷಮಿಸಬೇಕು. ಆ ಪದವಿಯನ್ನು ನಿರ್ವಹಿಸುವಂಥ ಶಕ್ತಿ ನನಗಿಲ್ಲ." ಎಂದನು ತುಂಬಾ ವಿನಯದಿಂದ.

ಮಾರ್ತಾಂಡನು ಆಶ್ಚರ್ಯದಿಂದ ಅವನನ್ನು ಪರೀಕ್ಷಿಸುವಂತೆ ನೋಡುತ್ತ, "ಹಾಗಾದರೆ ಸರಿ. ನಿನ್ನಿಷ್ಟ. ಆದರೆ ನೀನು ಬೆಳಗಾಗುವುದರೊಳಗೆ ಈ ನಗರದ ಗಡಿಯನ್ನು ಬಿಟ್ಟುಹೋಗಿಬಿಡು! ಕಳಿಂಗ ದೇಶದಲ್ಲಿ ನೀನಿರುವುದು ತಿಳಿದರೆ ನಿನ್ನ ಪ್ರಾಣವು ದಕ್ಕದು" ಎಂದನು. "ಅಪ್ಪಣೆ ಮಹಾರಾಜರೇ!" ಎಂದು ದಯಾನಿಧಿ ರಾಜನಿಂದ ಅನುಜ್ಞೆ ಪಡೆದು, ಆ ರಾತ್ರಿಯಲ್ಲೇ ದೇಶಾಂತರಕ್ಕೆ ಹೊರಟುಹೋದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ದಯಾನಿಧಿ ಏತಕ್ಕಾಗಿ ಸರ್ವ ಸೇನಾಧಿಪತಿ ಪದವಿಯನ್ನು ತ್ಯಾಗ ಮಾಡಿದನು? ಅಷ್ಟು ದೊಡ್ಡ ಪದವಿಗೆ ಶಕ್ತಿ ಸಾಲದೆಂದುಕೊಂಡನೇಕೆ? ಅದು ನಿಜವೇ? ಅವನ ಸಂಗತಿ ಹಾಗಿದ್ದರೆ, ಮಾರ್ತಾಂಡ ರಾಜನ ಪ್ರವರ್ತನೆಗೆ ಅರ್ಥವೇನು? ಅವನು ದಯಾನಿಧಿಗೆ ದೇಶಬಹಿಷ್ಕರಣ ಶಿಕ್ಷೆ ಕೊಟ್ಟನೇಕೆ? ಯಾರೂ ಮಾಡದ, ಮರೆಯಲಾಗದಂತಹ ಸಹಾಯವನ್ನೇ ದಯಾನಿಧಿ ಮಾಡಿ, ಕಳೆದುಹೋದ ಸಿಂಹಾಸನವನ್ನು ಮತ್ತೆ ಕೊಡಿಸಿದವನಾಗಿರುವಾಗ, ಅಂಥವನನ್ನು ಸಾಧಾರಣ ದಳಪತಿಯಂತಾದರೂ ಇರಿಸಬಹುದಿತ್ತಷ್ಟೆ? ತಾನು ಮೆಚ್ಚಿಕೊಡುವ ಪದವಿಯನ್ನು ನಿರಾಕರಿಸಿದನೆಂದು ರಾಜನಿಗೆ ಅವನ ಮೇಲೆ ಕೋಪವೇ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದೂ ಹೇಳದೆಹೋದರೆ ನಿನ್ನ ತಲೆ ಸಾವಿರ ಹೋಳಾಗಿ ಚೆದರುತ್ತದೆ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ದಯಾನಿಧಿ ಅಪಾರವಾದ ರಾಜಭಕ್ತಿಯುಳ್ಳವನೆಂದು ನಂಬಿದುದರಿಂದ ಮಾರ್ತಾಂಡರಾಜನು ಅವನನ್ನು ಸರ್ವ ಸೇನಾಧಿಪತಿಯಾಗಿ ಮಾಡಬೇಕೆಂದು ಅಂದುಕೊಂಡನು. ಆದರೆ ದಯಾನಿಧಿ ಅದನ್ನು ಒಪ್ಪಿಕೊಳ್ಳದೆ ನಿರಾಕರಿಸಿದುದನ್ನು ನೋಡಿ, ಅವನನ್ನು ಕಾರ್ಯಗಳಿಗೆ ಪ್ರೇರೇಪಿಸುವುದು ರಾಜಭಕ್ತಿಯಲ್ಲವೆಂದೂ ದೇಶಾಭಿಮಾನವೆಂದೂ ರಾಜನಿಗೆ ಗೊತ್ತಾಯಿತು. ದಯಾನಿಧಿ ಮಾನವತಾವಾದಿಯಾದ ಗುಣದವನು. ಆದುದರಿಂದಲೇ ಗಾಯಗೊಂಡು ಬಿದ್ದ ಶತ್ರು ಸೈನಿಕರಿಗೆ ಚಿಕಿತ್ಸೆ ಮಾಡಿಸಿ ಸತ್ತವರನ್ನು ಕೂಡಾ ಪದ್ಧತಿಯಂತೆ ಹುಗಿಸಿದ್ದಾನೆ. ವೀರವರ್ಮನು ಪ್ರಜೆಗಳಿಗೆ ಕಂಟಕನಾಗಿಲ್ಲದಿರುತ್ತಿದ್ದರೆ ದಯಾನಿಧಿ ಮಾರ್ತಾಂಡನಿಗೆ ತಿರುಗಿ ರಾಜ್ಯವು ಬರುವಂತಹ ಉದ್ಯಮಕ್ಕೆ ತಲೆ ಹಾಕುತ್ತಿರಲಿಲ್ಲ. ಇದನ್ನು ಅರಿತುಕೊಂಡು ಮಾರ್ತಾಂಡನು ಅವನಿಗೆ ದೇಶಬಹಿಷ್ಕಾರ ಶಿಕ್ಷೆ ವಿಧಿಸಿದ್ದಾನೆ. ದೇಶಾಭಿಮಾನವುಳ್ಳವನಿಗೆ ಅದು ತೀವ್ರವಾದ ಶಿಕ್ಷೆಯಾಗುತ್ತದೆ. ಮಾರ್ತಾಂಡನು ದಯಾನಿಧಿಯನ್ನು ಹಾಗೆ ಶಿಕ್ಷಿಸದೆ ಬಿಟ್ಟಿದ್ದರೆ ಮುಂದೆ ತನ್ನ ಪರಿಪಾಲನೆಯಲ್ಲಿ ಪ್ರಜೆಗಳು ಕಷ್ಟಪಡುವ ಹಾಗಾಗಿಬಿಟ್ಟರೆ, ಈ ದಯಾನಿಧಿಯೇ ತನ್ನನ್ನು ಸಿಂಹಾಸನದಿಂದ ತೊಲಗಿಸಿಬಿಡಲೂ ಹಿಂಜರಿಯುವವನಲ್ಲವೆಂದು ರಾಜನಿಗೆ ಗೊತ್ತಾಗಿತ್ತು. ಆದುದರಿಂದಲೇ ರಾಜನ ನಿರ್ಣಯ ಹಾಗಾಯಿತು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಹೋಲಿಕೆ

ಒಂದು ಊರಿನಲ್ಲಿ ರಾಜಯ್ಯನೂ ಪಾರ್ವತಮ್ಮನೂ ಗಂಡಹೆಂಡಿರಾಗಿದ್ದರು. ಅವರಿಗೆ ರಾಗಿಣಿ ಎಂಬೊಬ್ಬಳು ಹೆಣ್ಣುಮಗಳು ಮಾತ್ರವೇ ಇದ್ದಳು. ರಾಜಯ್ಯನು ಸಾಧಾರಣ ರೀತಿಯ ಉದ್ಯೋಗದವನಾದುದರಿಂದ ಸಾಧಾರಣ ಮಟ್ಟದಲ್ಲಿಯೇ ಜೀವನದ ಗಾಡಿಯನ್ನು ದೂಡಿಕೊಂಡಿದ್ದನು. ಮಗಳು ರಾಗಿಣಿ ಸಾಧಾರಣದ ಹೆಣ್ಣೇಹೊರತು ಸುಂದರಿಯರ ಗುಂಪಿಗೆ ಸೇರಿದವಳಲ್ಲ. ಆದುದರಿಂದ ರಾಜಯ್ಯನು ಮುಂದಾಲೋಚನೆಯಿಂದ ಮಗಳ ಮದುವೆಗಾಗಿ ಸಾಧ್ಯವಾದಷ್ಟು ಹಣವನ್ನು ಸೇರಿಸಿಡುತ್ತಾ ಬಂದಿದ್ದನು.

ಆ ಕಾಲವೂ ಬಂದಿತು. ರಾಜಯ್ಯ ವರಾನ್ವೇಷಣೆಗೆ ತೊಡಗಿದನು. ಸೇರಿಬಂದ ಅನೇಕ ಸಂಬಂಧಗಳು ವರದಕ್ಷಿಣೆಯ ಮಾತು ಬಂದಾಗ ಬಿದ್ದು ಬಿದ್ದು ಹೋದುವು. ಮತ್ತೆ ಕೆಲವು ಹುಡುಗಿ ಹಿಡಿಸದ ಕಾರಣದಿಂದ ಬಿಟ್ಟುಹೋದುವು. ಕಡೆಗೆ ಒಂದು ಸಂಬಂಧದ ವರನು ರಾಜಯ್ಯನಿಗೂ ಪಾರ್ವತಿಗೂ ರಾಗಿಣಿಗೂ ಸಹ ತುಂಬಾ ಮೆಚ್ಚಿಗೆಯಾಯಿತು. ಅವರಿಗೂ ಹುಡುಗಿ ಹಿಡಿಸಿದಳು. ಆದರೆ ಹುಡುಗನ ತಂದೆ ವರದಕ್ಷಿಣೆಯ ವಿಷಯದಲ್ಲಿ ಖಂಡಿತವಾಗಿದ್ದರು. ಅಲ್ಲಿಗೆ ಹೋಗಿ ಮಾತಾಡಿಬಂದ ರಾಜಯ್ಯನು "ನಮ್ಮ ರಾಗಿಣಿ ಅವರಿಗೆಲ್ಲ ಹಿಡಿಸಿದಳೇನೋ ನಿಜ. ಆದರೆ ಅವರು ನಗದಾಗಿ ಕೇಳುವ ಹತ್ತು ಸಾವಿರಕ್ಕೆ ನಾನೇನು ಮಾಡಲಿ?" ಎನ್ನುತ್ತ ಸುಸ್ತಾಗಿ ಉಸ್ಸೆಂದನು.

ರಾಗಿಣಿ ಅಲ್ಲಿಯೇ ಇದ್ದು ತಂದೆಯ ಮಾತನ್ನು ಕೇಳಿ "ಹಣಕ್ಕಾಗಿಯೇ ಮದುವೆ ಮಾಡಿಕೊಳ್ಳುವ ವರನಾದರೆ ನನಗೆ ಬೇಡ" ಎಂದಳು ಕೋಪದಿಂದ.

"ಬಾಯಿ ಮುಚ್ಚಿ ಸುಮ್ಮನಿರೇ!" ಎಂದು ಪಾರ್ವತಮ್ಮ ಮಗಳ ಮೇಲೆ ರೇಗಿ, ಗಂಡನೊಂದಿಗೆ, "ಅವರಿಗೆ ಹುಡುಗಿ ಹಿಡಿಸಿದ್ದೇ ದೊಡ್ಡದು. ನಾವು ಹಣಕ್ಕಾಗಿ ನೋಡಿದರೆ, ಈ ಸಂಬಂಧ ತಪ್ಪಿಹೋದರೆ ಇವಳಿಗೆ ಈ ಜನ್ಮದಲ್ಲಿ ಮದುವೆಯಾಗದು." ಎಂದಳು. "ಅದಕ್ಕೆ ಹೇಗೆ ಹಣತರಲಿ? ಯಾರ ಮನೆಗಾದರೂ ಕನ್ನ ಹಾಕಬೇಕೇನು?" ಎಂದ ರಾಜಯ್ಯ ಕೋಪದಿಂದ.

ಗಂಡಹೆಂಡಿರು ಸ್ವಲ್ಪ ಹೊತ್ತು ತರ್ಜನೆಭರ್ಜನೆ ಮಾಡಿಕೊಂಡರು. ಲೆಕ್ಕ ನೋಡಿಕೊಂಡರು. ಐದು

ಎಂ. ಕೆ. ಈಶ್ವರರಾವ್



ಸಾವಿರದಷ್ಟನ್ನು ಹೇಗಾದರೂ ಸುಧಾರಿಸ ಬಹುದಾಗಿತ್ತು. ಉಳಿದೈದು ಸಾವಿರಕ್ಕೋ ?

ಅಷ್ಟರಲ್ಲಿ ಕತ್ತಲೆಯಾಗಿ ಹೋಯಿತು. ಯಾರೋ ಹೊರಬಾಗಿಲು ತಟ್ಟುವ ಶಬ್ದ ಕೇಳಿತು. ರಾಜಯ್ಯನು ಹೋಗಿ ಬಾಗಿಲು ತೆರೆದು ನೋಡಿದನು. ಹೊರಗೆ ಯಾವನೋ ಒಬ್ಬ ಹೊಸಬನು ನಿಂತಿದ್ದು, "ಸುಬ್ಬಾಶೆಟ್ರು ಈ ಪೆಟ್ಟಿಗೆ ನಿಮಗೆ ಕೊಡಲು ಕಳಿಸಿದ್ದಾರೆ. ಪ್ರಸ್ತುತಕ್ಕೆ ಎಂಟು ಸಾವಿರದ ನಗಗಳು ಮಾತ್ರ ಇವೆಯಂತೆ. ಅವರಿಗೇನಾದರೂ ಹೇಳಬೇಕೇ ? ತಗೊಳ್ಳಿ ಈ ಪೆಟ್ಟಿಗೆ" ಎಂದು ಒಂದು ಸಣ್ಣ ಪೆಟ್ಟಿಗೆಯನ್ನು ಮುಂದಿಟ್ಟನು. ರಾಜಯ್ಯನಿಗೆ ಒಂದೂ ಅರ್ಥವಾಗಲಿಲ್ಲ. ಸುಬ್ಬಾಶೆಟ್ಟರನ್ನೂ ಅವನು ಅರಿಯನು. "ಯಾವ ಸುಬ್ಬಾಶೆಟ್ರು ಇದನ್ನು ಕಳಿಸಿದ್ದು?" ಎಂದು ಆ ಹೊಸ ಮನುಷ್ಯನನ್ನು ಕೇಳಿದನು.

ಈ ಪ್ರಶ್ನೆಯಿಂದ ಹೊಸ ಮನುಷ್ಯನಿಗೆ ರಾಜಯ್ಯನ ವಿಷಯದಲ್ಲಿ ಅನುಮಾನ ಬಂದಂತೆ ತೋರಿತು. ಅವನು ಒಂದು ಸಾರಿ ಮನೆಯ ಮುಂದಿದ್ದ ಬೇವಿನ ಮರದ ಕಡೆಗೆ ನೋಡಿ, "ಬೇವಿನ ಮರದ ಮುಂದೆ ಇರುವ ನಾರ್ಣಪ್ಪನ ಮನೆಯವರಿಗೆ ಕೊಟ್ಟುಬಾ ಅಂದರು. ನೀವು ನಾರ್ಣಪ್ಪನವರು ಅಲ್ಲವೇ ?" ಎಂದು ಕೇಳಿದನು.

ರಾಜಯ್ಯ ಉತ್ತರ ಕೊಡುವುದರೊಳಗೆ, ಅವನ ಹಿಂದೆಯೇ ಇದ್ದ ಪಾರ್ವತಮ್ಮ ಬಾಯಿಹಾಕಿ, "ಹೌದಪ್ಪ, ಇದೇ ಮನೆ. ನೀನು ಬರಬೇಕಾದ ಮನೆಗೇ ಬಂದಿದ್ದೀ. ಸುಬ್ಬಾಶೆಟ್ರು ನಿನ್ನೆಯೇ ನಗಗಳನ್ನು ಕಳಿಸುತ್ತೇನೆ ಅಂದಿದ್ರು. ಇಷ್ಟಾದರೂ ಇವತ್ತು ಕಳಿಸಿದರಲ್ಲಾ ? ನಾವೇ ಮತ್ತೆ ಮಾತಾಡ್ತೇವೆ ಅಂತ ಹೇಳು" ಎಂದಳು.

"ಸರಿಯಮ್ಮಾ" ಎಂದು ಹೇಳಿ ಆ ಮನುಷ್ಯ ಹೊರಟುಹೋದನು. ಪಾರ್ವತಿ ಪೆಟ್ಟಿಗೆ ಎತ್ತಿಕೊಂಡು ಒಳಗೆ ಹೋದಳು. ಅವಳ ಹಿಂದೆಯೇ ರಾಜಯ್ಯನೂ ಬಾಗಿಲು ಹಾಕಿಕೊಂಡು ಒಳಗೆ ಹೋಗಿ ಆ ಪೆಟ್ಟಿಗೆಯನ್ನು ತೆರೆದು ನೋಡಿದನು. ಪೆಟ್ಟಿಗೆಯಲ್ಲಿ ಜಗಜಗಿಸುವ ಬಂಗಾರದ ನಗಗಳು !

"ಓ ! ಎಂಟು ಸಾವಿರ ಬೆಲೆಯ ನಗಗಳು ! ಹುಡುಗಿಗೆ ಮದುವೆ ನಿಶ್ಚಯವಾದ ಹಾಗೇ ಆಯಿತು ಬಿಡಿ !" ಎಂದಳು ಸಂತೋಷದಿಂದ ಪಾರ್ವತಮ್ಮ.

"ಅದು ಹೇಗಮ್ಮಾ ? ಇವೆಲ್ಲ ಯಾರವೋ ಏನೋ ? ಯಾರು ಯಾರಿಗಾಗಿ ಕಳಿಸಿದ್ದೋ ?" ಎಂದು ರಾಗಿಣಿ ಅದನ್ನು ನೋಡುತ್ತಾ ಕೇಳಿದಳು.

"ನೀನು ಬಾಯಿಮುಚ್ಚಿ ಸುಮ್ಮನಿರೇ ! ಅಪಶಕುನದ ಹಾಗೆ ಏನಾದರೂ ಅಪಸ್ವರ ಎತ್ತಿಕೊಂಡು !" ಎಂದು ಪಾರ್ವತಮ್ಮ ಬಯ್ಯಲು ರಾಗಿಣಿ ತಲೆತಗ್ಗಿಸಿ ಒಳಕ್ಕೆ ಹೋದಳು.

"ನಿನ್ನ ಬುದ್ಧಿಗೆ ಮೆಚ್ಚುತ್ತೇನೆ ಕಣೆ ! ದೇವರು ದಯೆಯಿಂದ ಕಣ್ಣು ತೆರೆದ ! ನಮ್ಮ ಮಗಳ ಮದುವೆಗಾಗೇ ಈ ನಗಗಳನ್ನು ದೇವರು ಕಳುಹಿಸಿ

ದ್ದಾನೆ. ಎರಡು ದಿನಗಳೊಳಗೆ ಇವುಗಳನ್ನೆಲ್ಲಾ ಕರಗಿಸಿ ಮಾರಿ ಹಣ ಮಾಡುತ್ತೇನೆ" ಎಂದನು ರಾಜಯ್ಯ.

"ದೇವರು ಏನೋ ಅರ್ಧದಷ್ಟು ಸಹಾಯ ಮಾಡಿದ್ದಾನೇಂತ ಉಬ್ಬಿಗಿಬ್ಬಿ ಹೋಗಿಬಿಡಬೇಡ್ರಿ! ಉಳಿದರ್ಧ ನಮ್ಮ ಬುದ್ಧಿವಂತಿಕೆಯಲ್ಲಿದೆ. ನಾಳೆ ಬೆಳಗಾದರೆ ಸುಬ್ಬಾಶೆಟ್ರಿಗೆ ಈ ನಗಗಳು ಸೇರಬೇಕಾದಲ್ಲಿಗೆ ಸೇರಲಿಲ್ಲವೆಂದು ಗೊತ್ತಾಗುತ್ತೆ. ಆ ಮನುಷ್ಯ ಬಂದು ಕೇಳಿದರೆ ಏನು ಮಾಡೋಣ ಅಂತ ಯೋಚಿಸಿದ್ದೀರಾ ?" ಎಂದಳು ಪಾರ್ವತಮ್ಮ.

"ಹೌದಲ್ಲ! ಒಂದು ಮಾಡೋಣ. ನಾನು ಈ ಪೆಟ್ಟಿಗೆಯನ್ನು ಮನೇ ಹಿಂದೆ ಹುಗಿದಿಡುತ್ತೇನೆ. ಯಾವನಾದರೂ ಬಂದು ಕೇಳಿದರೆ ನಮಗೇನೂ ಗೊತ್ತಿಲ್ಲವೆನ್ನೋಣ. ಅವನು ಈ ಪೆಟ್ಟಿಗೆ ತಂದು ನಮಗೆ ಕೊಡುವುದನ್ನು ಯಾರು ನೋಡಿದ್ದಾರೆ ?" ಎಂದನು ರಾಜಯ್ಯ.

ಅದೇ ಸರಿಯೆಂದು ಆ ಗಂಡಹೆಂಡಿರು ಪೆಟ್ಟಿಗೆಯನ್ನು ಮನೆಯ ಹಿಂದಿನ ತೆಂಗಿನ ಮರದ ಬುಡದಲ್ಲಿ ಹುಗಿದಿಟ್ಟರು. ಬೆಳಗಾಯಿತು. ಸ್ವಲ್ಪ ಹೊತ್ತಿಗೆ ಮನೆಯ ಮುಂದೆ ಯಾರೋ ಬಂದು ಗಟ್ಟಿಯಾಗಿ ಕೂಗಿಕೊಳ್ಳುತ್ತ ಬಾಗಿಲು ಬಡೆಯುವುದು ಕೇಳಿತು. ಗಂಡಹೆಂಡಿರು ಒಬ್ಬರಿಗೊಬ್ಬರು ಧೈರ್ಯ ಹೇಳಿಕೊಂಡು ಮನೆಯ ಹೊರಗೆ ಬಂದರು. ಕಳೆದ ರಾತ್ರಿ ನಗಗಳ ಪೆಟ್ಟಿಗೆ ತಂದುಕೊಟ್ಟವನು; ತುಂಬ ಕಳವಳದಿಂದಲೂ ಕೋಪದಿಂದಲೂ ಅವರನ್ನು ನೋಡಿ, "ಎಂಥಾ ಮೋಸ ನಿಮ್ಮದು! ಹೀಗೂ ಉಂಟೇ ? ನಾರ್ಣಪ್ಪರ ಹೆಸರು ಹೇಳಿಕೊಂಡು ಆ ಪೆಟ್ಟಿಗೆ ಯಾವ ಧೈರ್ಯದಿಂದ ತಕ್ಕೊಂಡಿರಿ ? ಹಾಂ! ಒಳ್ಳೇ ಮಾತಿನಲ್ಲಿ ಆ ಪೆಟ್ಟಿಗೇನ ನನ್ನ ಕೈಗೆ ವಾಪಸು ಕೊಡಿ! ಕೊಡ್ತಿರಾ ಇಲ್ಲವಾ ?" ಎಂದನು.



"ಯಾರಿವನು ಹುಚ್ಚ! ಬೆಳಗು ಮುಂಜಾನೆ ಕುಡಿದುಬಂದು ಬಾಯಿಗೆ ಬಂದ ಹಾಗೆ ಬೊಗಳ್ತಾನೆ! ಹೋಗೋ ಆಚೆಗೆ!" ಎಂದು ರಾಜಯ್ಯ ಕೋಪದಿಂದ ಗದರಿಸಿದ.

"ಹುಚ್ಚನ ಹತ್ರ ಹೆಚ್ಚು ಮಾತಾಡಬೇಡಿಂದ್ರೆ! ಬಾಗಿಲು ಮುಚ್ಚಿ ಒಳಗೆ ಬನ್ನಿ" ಎಂದಳು ಪಾರ್ವತಮ್ಮ. ಅದನ್ನು ಕೇಳಿ ಆ ಮನುಷ್ಯ ಇನ್ನಷ್ಟು ಕರ್ಕಶವಾಗಿ ಕೂಗತೊಡಗಿದ. ರಾಜಯ್ಯ ಅವನನ್ನು ಲಕ್ಷ್ಯಮಾಡದೆ, "ತಲೆಹರಟೆ ನಿಲ್ಲಿಸು. ನೀನು ಕತ್ತಲೆಯಲ್ಲಿ ಯಾರ ಮನೆಯಲ್ಲಿ ಕೊಟ್ಟೆಯೋ ಅಲ್ಲಿಗೇ ಹೋಗಿ ಕೇಳು. ನಮಗೇನು ಗೊತ್ತು ಅದೆಲ್ಲಾ ? ಯಾವುದೋ ಒಂದು ಶುಭ ಕಾರ್ಯಕ್ಕೆ ನಾವಿರುವಾಗ. ಬೆಳಗಾಗುವುದಕ್ಕೆ ಮೊದಲೇ ಇಲ್ಲಿ ನಿಂತೇಕೆ ಕೂಗಾಡ್ತೀ ? ಬುದ್ಧಿ ಸ್ವಾಧೀನವಿಟ್ಟುಕೊಂಡು ಹುಡುಕಿಕೋ ಹೋಗು!" ಎಂದನು. ಪಾರ್ವತಮ್ಮನೂ ಹಾಗೆಯೇ ಬಾಯಿ ಹಾರಿಸಿದಳು.

"ಸಾಕು. ನಿಮಗಾರಿಗೂ ಇನ್ನು ಆ ಶುಭ ಕಾರ್ಯದ ಶ್ರಮತಪ್ಪಿತು. ಈ ಮದುವೆ ನಡೆಯದು! ನಿಂತಿತು!" ಎನ್ನುತ್ತ ಗೋಡೆಯ ಮರೆಯಿಂದ ವರನ ತಂದೆ ಈಚೆಗೆ ಬಂದನು. ಅವನನ್ನು ನೋಡಿ ರಾಜಯ್ಯನೂ ಪಾರ್ವತಮ್ಮನೂ ಬೆಪ್ಪುಬಡೆದು ನಿಂತರು. ಅವರ ಮುಂದೆ ವರನ ತಂದೆ, "ನಮಗೆ ವರದಕ್ಷಿಣೆ ಒಂದೇ ಒಂದು ಚಿಕ್ಕಾಸು ಕೂಡಾ ಬೇಕಾಗಿದ್ದಿಲ್ಲ. ನಮಗೆ ಬೇಕಾದ್ದು ಕುಟುಂಬಗೌರವವೂ ಸಾಂಪ್ರದಾಯವೂ ಮಾತ್ರ. ನಿಮ್ಮ ಗುಣಗಳೂ ಪ್ರಾಮಾಣಿಕತೆಯೂ ಹೇಗಿದೆ ಎಂದು ಪರೀಕ್ಷಿಸಲಿಕ್ಕಾಗಿಯೇ ಅಷ್ಟು ವರದಕ್ಷಿಣೆ ಕೇಳಿ ಗಿಲೀಟು ನಗಗಳನ್ನು ಪೆಟ್ಟಿಗೆಯೊಳಗಿಟ್ಟು ಇವನ ಹತ್ತಿರ ಕೊಟ್ಟುಕಳಿಸಿ ನಾಟಕ ಮಾಡಿಸಿದೆ. ನಿಮ್ಮ ನಿಜಬುದ್ಧಿ ಗೊತ್ತಾಗಿ ಹೋಯಿತು. ನೀವು ಹಣಕ್ಕಾಗಿ ಏನು ಬೇಕಾದರೂ ಮಾಡುವವರು. ನಿಮ್ಮ ಹೋಲಿಕೆಯೇ ನಿಮ್ಮ ಮಗಳಿಗೂ ಬರುತ್ತೆ. ಅಂತಹ ಹುಡುಗಿ ನಮಗೆ ಬೇಡ" ಎಂದನು.

ಆಗ ಅಕಸ್ಮಾತ್ತಾಗಿ ರಾಗಿಣಿ ಹೊರಗಿನಿಂದ ಅಲ್ಲಿಗೆ ಬಂದು "ಸಾಕು ನಿಲ್ಲಿಸಿರಿ. ನಿಮ್ಮ ಮಾತಿಗೆ ಅರ್ಥವಿಲ್ಲ. ತಂದೆತಾಯಿಗಳ ಕಣ್ಣುಮೂಗು ಬಾಯಿಗಳೇ ಮಕ್ಕಳಿಗೆ ಬರುತ್ತವಲ್ಲದೆ ಬುದ್ಧಿಯೂ ಹಾಗೆ ಬರುತ್ತದೆಂದರೆ ಒಪ್ಪಲಾರೆ. ಬುದ್ಧಿ ಸಾವಾಸದಿಂದ ಬೆಳೆಯುವಂಥಾದ್ದು. ನಾನು ಅಪ್ಪನಿಗೂ ಅಮ್ಮನಿಗೂ ಗೊತ್ತಾಗದ ಹಾಗೆ ಮಧ್ಯರಾತ್ರಿಯಲ್ಲೇ ಎದ್ದು ಪೆಟ್ಟಿಗೆಯನ್ನು ಹುಗಿದಲ್ಲಿಂದ ತೆಗೆದು, ಬೆಳಂಜಾವದಲ್ಲಿ ಕೋತ್ವಾಲ ಕಛೇರಿಗೆ ಹೋಗಿ, ಮನೆಯ ಮುಂದೆ ಬಿದ್ದಿತ್ತು ಅಂತ ಹೇಳಿ ಕೊಟ್ಟುಬಂದಿದ್ದೇನೆ. ನಿಮ್ಮ ಗಿಲೀಟು ನಗಗಳ ಪೆಟ್ಟಿಗೆಯನ್ನು ಅಲ್ಲಿಂದ ತಂದುಕೊಳ್ಳಿ. ಈ ಮದುವೆ ನಿಂತುಹೋದರೆ ಆಗುವ ನಷ್ಟ ನಮಗೇನಿಲ್ಲ" ಎಂದು ಹೇಳಿ ಸರ್ರನೆ ಒಳಕ್ಕೆ ಹೋದಳು.

ರಾಜಯ್ಯನೂ ಪಾರ್ವತಮ್ಮನೂ ಮಾತಾಡಲಿಲ್ಲ. ವರನ ತಂದೆ ತಲೆ ಬಗ್ಗಿಸಿಕೊಂಡು ಹೊರಟುಹೋದನು.

ಆ ದಿನ ಸಾಯಂಕಾಲ ರಾಗಿಣಿ ಗಿಡಗಳಿಗೆ ನೀರು ಹೊಯ್ಯುತ್ತಿದ್ದಾಗ, ವರನಾಗಿದ್ದ ಅದೇ ಯುವಕನು ಅವಳ ಬಳಿಗೆ ಬಂದು, "ನನ್ನ ತಂದೆ ಹೀಗೆಲ್ಲಾ ಪರೀಕ್ಷೆ ಮಾಡಿಸಿದ ವಿಷಯ ನನಗೆ ಗೊತ್ತೇ ಇರಲಿಲ್ಲ. ನಿಮಗೆ ನಡೆದ ಅವಮಾನಗಳಿಗೆ ಕ್ಷಮೆ ಕೇಳಲಿಕ್ಕೇ ಬಂದಿದ್ದೇನೆ. ನಿನ್ನನ್ನೇ ಮದುವೆಯಾಗಲಿಕ್ಕೂ ನಾನು ಸಿದ್ಧನಾಗಿದ್ದೇನೆ. ನೀನು ಸರಿಯೆಂದರೆ ನಿನ್ನ ತಂದೆಯನ್ನು ನೋಡಿ ಸಮಾಧಾನ ಹೇಳಿ ಕ್ಷಮೆ ಕೇಳುತ್ತೇನೆ." ಎಂದನು ಅನುರಾಗದಿಂದ.

ರಾಗಿಣಿ ಏನೂ ಹೇಳದೆ ಮುಗುಳು ನಗುತ್ತ, ನಸು ಲಜ್ಜೆಯೊಂದಿಗೆ ತಲೆಯಾಡಿಸಿದಳು.





# ಅಪರಾಧ ಪರಿಶೋಧನೆ

ಪೂರ್ವ ಕಾಲದಲ್ಲಿ ಶ್ರಾವಸ್ತಿ ನಗರವನ್ನು ಪ್ರಸೇನಜಿತು ಎಂಬ ಮಹಾರಾಜನು ಪಾಲಿಸಿ ಕೊಂಡಿದ್ದನು. ಒಂದುದಿನ ಆ ದೇಶಕ್ಕೆ ಯಾವುದೋ ದೂರ ದೇಶದಿಂದ ಒಬ್ಬ ಬ್ರಾಹ್ಮಣನು ಬಂದನು. ಬಹಳ ಬಡವನಾಗಿ ದಿಕ್ಕಿಲ್ಲದೆ ದೇಶ ಸಂಚಾರ ಹೊರಟಿದ್ದ ಆ ಬ್ರಾಹ್ಮಣನಿಗೆ, ಅದೃಷ್ಟವಶಾತ್ ಶ್ರಾವಸ್ತಿ ನಗರದಲ್ಲಿ ದೊಡ್ಡದೊಡ್ಡ ವೈಶ್ಯರ ಆದರವೂ ಆಶ್ರಯವೂ ದೊರಕಿತು. ದಿನಾ ಅವನಿಗೆ ಅನ್ನವಸ್ತ್ರಗಳು ಸಿಗುವುದು ಮಾತ್ರವಲ್ಲದೆ ದಾನ ದಕ್ಷಿಣೆ ಸಂಭಾವನೆಗಳು ಯಥೇಷ್ಟವಾಗಿ ಸಿಗತೊಡಗಿದುವು. ಏಕಾಂಗಿಯಾಗಿದ್ದ ಆ ಬ್ರಾಹ್ಮಣನು ಹಾಗೆ ಸಿಕ್ಕಿದ ಹಣವನ್ನೆ ಖರ್ಚುಮಾಡುವ ದಾರಿ ಕಾಣದೆ ತನ್ನ ಹತ್ತಿರವೇ ಸೇರಿಸಿಟ್ಟುಕೊಂಡನು. ಕೆಲವು ತಿಂಗಳೊಳಗೆ ಅವನ ಹತ್ತಿರ ಸಾವಿರ ಚಿನ್ನದ ನಾಣ್ಯಗಳಾದುವು. ಆದರಿಂದ ಅವನಿಗೆ ತಕ್ಕ ಕನ್ಯೆ ಸಿಕ್ಕಿದಾಗ ಮದುವೆ ಮಾಡಿಕೊಳ್ಳುವ ಇಚ್ಛೆಯುಂಟಾಗಿ, ಹಣವನ್ನು ಕಾಡಿನಲ್ಲೊಂದು ಕಡೆ ಹುಗಿದಿಟ್ಟನು.

ಬಂಧುಮಿತ್ರ ಬಳಗಗಳಾರೂ ಇಲ್ಲದ ಆ ಪರದೇಶೀ ಬ್ರಾಹ್ಮಣನು ಆ ಚಿನ್ನದ ನಾಣ್ಯಗಳಿಂದ ಒಳ್ಳೆಯ ಸ್ಥಿತಿಗೆ ಬರಬೇಕೆಂಬ ಉದ್ದೇಶದಲ್ಲಿ, ಅವನ ಮನಸ್ಸು ಆ ಚಿನ್ನದ ನಾಣ್ಯಗಳ ಮೇಲೆಯೇ ನಿಂತಿತ್ತು. ಯಾರಿಗೂ ಗೊತ್ತಾಗದಂತೆ ದಿನಾ ಅಡವಿಗೆ ಹೋಗಿ ಧನವು ಭದ್ರವಾಗಿರುವುದನ್ನು ದೃಢಪಡಿಸಿಕೊಂಡು ಹಿಂದಿರುಗುತ್ತಿದ್ದನು.

ಈ ವಿಧವಾಗಿ ಒಂದುದಿನ ಅವನು ಅಡವಿಗೆ ಹೋಗಿ ನೋಡಿದಾಗ ಹುಗಿದಿಟ್ಟ ಜಾಗ ಭಗ್ನವಾಗಿತ್ತು. ಅಲ್ಲಿದ್ದ ಧನವನ್ನು ಯಾರೋ ಎಬ್ಬಿಸಿಕೊಂಡು ಹೋಗಿಬಿಟ್ಟಿದ್ದರು. ಇದನ್ನು ನೋಡಿದ ಕೂಡಲೇ ಅವನ ಆಕಾಶ ಗೋಪುರವೆಲ್ಲಾ ಕಳಚಿಬಿತ್ತು. ಹುಚ್ಚು ಹಿಡಿದವನಂತೆ ಎದೆ ಬಡೆದುಕೊಳ್ಳುತ್ತಾ ನಗರದ ಬೀದಿಗಳಲ್ಲಿ ತಿರುಗುತ್ತಾ ಅಳತೊಡಗಿದನು. ಅವನಿಗೆ ಸಮಾಧಾನ ಹೇಳುವುದು ಹೇಗೆಂದು ಯಾರಿಗೂ ಗೊತ್ತಾಗಲಿಲ್ಲ.

"ನನ್ನ ಹಣವೆಲ್ಲಾ ಹೋದ ಮೇಲೆ ನಾನು ಜೀವಿಸಿದ್ದು ಏನು ಪ್ರಯೋಜನ? ನದಿಗೆ ಹಾರಿ ಆತ್ಮಹತ್ಯ ಮಾಡಿಕೊಳ್ಳುತ್ತೇನೆ" ಎಂದು ಹೇಳಿಕೊಳ್ಳುತ್ತ, ಆ ಬ್ರಾಹ್ಮಣನು ನದಿಯ ಕಡೆಗೆ ಹೋಗಿ ಆಳದೊಳಗೆ ಹಾರಲು ಸಿದ್ಧನಾದನು.

**೨೫ ವರ್ಷಗಳ ಹಿಂದಿನ ಚಂದಮಾಮ ಕಥೆ**

ಆಗಲೇ ನದಿಯಲ್ಲಿ ಸ್ನಾನಮಾಡಿ ಮೇಲೆ ಬಂದಿದ್ದ ಪ್ರಸೇನಜಿತ್ತು, ರಾಜನು ಆತ್ಮಹತ್ಯಕ್ಕೆ ನೋಡುವ ಆ ಬ್ರಾಹ್ಮಣನನ್ನು ತಡೆದು ನಿಲ್ಲಿಸಿ, ಅವನಿಗೆ ಬಂದ ಕಷ್ಟವನ್ನು ಕೇಳಿ ತಿಳಿದು. "ಅಷ್ಟೇ ತಾನೇ ಹುಚ್ಚ ಬ್ರಾಹ್ಮಣಾ! ಇದಕ್ಕಾಗಿ ಆತ್ಮಹತ್ಯ ಮಾಡಿಕೊಳ್ಳ ಬೇಕೆ? ರಾಜ್ಯದಲ್ಲಿ ಕಳ್ಳತನಗಳಾದರೆ ಕಂಡು ಹಿಡಿಯಲು ನಾನಿಲ್ಲವೇ? ನಿನ್ನ ಧನವನ್ನು ಕದ್ದವ ನನ್ನು ನಾನು ಕಂಡುಹಿಡಿಯುತ್ತೇನೆ. ಇಲ್ಲವೇ ನಿನ್ನ ಸೊತ್ತು ಎಷ್ಟು ಹೋಯಿತೋ ಅಷ್ಟನ್ನು ನನ್ನ ಬೊಕ್ಕಸದಿಂದ ಕೊಡಿಸುತ್ತೇನೆ. ಈಗ ವಿವರ ಹೇಳು. ನೀನು ಧನವನ್ನು ಹುಗಿದ ಸ್ಥಳಕ್ಕೆ ಏನಾದರೂ ಗುರುತಿದೆಯೇ?" ಎಂದು ಕೇಳಿದನು.

"ಮಹಾಪ್ರಭೂ! ನಾನು ಧನವನ್ನು ಹುಗಿದಿಟ್ಟ ಜಾಗದಲ್ಲಿ ಸಣ್ಣದೊಂದು ನಾಗಬಲಗಿಡವಿತ್ತು. ಈಗ ಅದು ಕೂಡಾ ಇಲ್ಲ." ಎಂದನು ಬ್ರಾಹ್ಮಣ.

"ಒಂದು ನಾಗಬಲ ಗಿಡವು ಹೇಗೆ ಗುರುತಾ ದೀತು? ಅಂಥಾದ್ದು ಎಷ್ಟಾದರೂ ಇರಬಹು ದಷ್ಟೆ?" ಎಂದನು ರಾಜ. "ಹಾಗಿಲ್ಲ ಮಹಾ ಪ್ರಭುಗಳೇ! ಆ ಪ್ರಾಂತದಲ್ಲೆಲ್ಲಿಯೂ ಅದರ ಹೊರತು ಬೇರೆ ನಾಗಬಲದ ಸಂತಾನವೇ ಇಲ್ಲ." ಎಂದನು ಬ್ರಾಹ್ಮಣ.

"ಸರಿ ನೋಡುವಾ. ನೀನು ಅಲ್ಲಿ ಧನವನ್ನು ಅಡಗಿಸಿಟ್ಟ ವಿಷಯ ಬೇರೆ ಯಾರಿಗಾದರೂ ಗೊತ್ತಿದೆಯೆ?" ಎಂದು ರಾಜನು ಕೇಳಿದನು.

"ಮಹಾಪ್ರಭುಗಳೇ, ನನ್ನ ಹೊರತು ಮತ್ತಾವ ಪ್ರಾಣಿಗೂ ...ಯದು. ಹೇಳಿಕೊಳ್ಳಲಿಕ್ಕಾದರೂ ನನಗೆ ಯಾರಿದ್ದಾರೆ? ನಾನು ಎಲ್ಲಿಗೆ ಹೋಗು ತ್ತೇನೆ, ಏನು ಮಾಡುತ್ತೇನೆ ಎಂಬುದನ್ನು ಹಚ್ಚಿ ಕೊಳ್ಳುವವರೇ ಯಾರೂ ಇಲ್ಲ." ಎಂದನು ಬ್ರಾಹ್ಮಣ.

"ಚಿಂತಿಸಬೇಡ" ಎಂದು ರಾಜನು ಬ್ರಾಹ್ಮಣ ನಿಗೆ ಸಮಾಧಾನ ಹೇಳಿ, ತನ್ನ ಭವನಕ್ಕೆ ಹಿಂದಿರುಗಿ, ಆ ಕಳ್ಳತನವನ್ನು ಕುರಿತು ತೀವ್ರವಾಗಿ ಆಲೋಚನೆ ಮಾಡಿದನು. ಕಳ್ಳನನ್ನು ಹಿಡಿಯುವ ಉಪಾಯ ವೊಂದು ರಾಜನ ಮನಸ್ಸಿಗೆ ಹೊಳೆಯಿತು. ಅವನು



ಮಂತ್ರಿಯನ್ನು ಕರೆಯಿಸಿ, "ಮಂತ್ರೀ, ನನಗೇನೋ ಸುಸ್ತಾಗಿದೆ. ನಗರದಲ್ಲಿರುವ ಎಲ್ಲಾ ವೈದ್ಯರನ್ನೂ ಕರೆಸಬೇಕು. ಒಬ್ಬ ವೈದ್ಯನಿಂದ ಪ್ರಯೋಜನವಾಗದು" ಎಂದು ಆಜ್ಞೆ ಮಾಡಿದನು.

ಮಂತ್ರಿ ಆಶ್ಚರ್ಯಪಡುತ್ತ ನಗರದಲ್ಲಿರುವ ಎಲ್ಲಾ ವೈದ್ಯರನ್ನೂ ಕರೆಯಿಸಿದನು. ರಾಜನು ಒಬ್ಬೊಬ್ಬ ವೈದ್ಯನನ್ನೇ ತನ್ನ ಹತ್ತಿರ ಬರಮಾಡಿಕೊಂಡು, "ಏನಯ್ಯಾ ವೈದ್ಯನೇ, ನೀನು ನಿನ್ನೆ ಮೊನ್ನೆ ಈ ದಿನಗಳಲ್ಲಿ ಯಾವಯಾವ ರೋಗಗಳಿಗೆ ಏನೇನು ಮೂಲಿಕೆಗಳ ಔಷಧಗಳನ್ನು ಉಪಯೋಗಿಸಿದೆ?" ಎಂದು ಪ್ರಶ್ನಿಸಿದನು. ಹೀಗೆ ಒಬ್ಬೊಬ್ಬರನ್ನೂ ಪ್ರಶ್ನಿಸಿ ಅವರು ಹೇಳುವ ಉತ್ತರವನ್ನು ಕೇಳಿ "ಸರಿ ಹೋಗಿ" ಎಂದು ಕಳುಹಿಸಿ ಬಿಡುತ್ತಿದ್ದನು. ಇದನ್ನೆಲ್ಲಾ ನೋಡುತ್ತಿದ್ದ ಮಂತ್ರಿಗೆ ರಾಜನ ಅಭಿಪ್ರಾಯವೇನೆಂದು ಗೊತ್ತಾಗಲಿಲ್ಲ.

ಕಡೆಗೆ ಒಬ್ಬ ವೈದ್ಯನು, "ಪ್ರಭುಗಳೇ, ನಿನ್ನೆ ಮಾತೃದತ್ತನೆಂಬ ವೈಶ್ಯನ ಚಿಕಿತ್ಸೆಗಾಗಿ ನಾಗಬಲದ ರಸ ಉಪಯೋಗಿಸಿದ್ದೇನೆ" ಎಂದನು. ರಾಜನು ಆಸಕ್ತಿಯಿಂದ "ಆ ಮೂಲಿಕೆ ಎಲ್ಲಿ ದೊರೆಯಿತು?" ಎಂದು ಕೇಳಿದನು.

"ಸುಲಭದಲ್ಲಿ ದೊರೆಯಲಿಲ್ಲ. ನನ್ನ ಸೇವಕನು ಅಡವಿಯಲ್ಲಿ ತಿರುಗಿ ತಿರುಗಿ ಹುಡುಕಿ ಒಂದು ನಾಗಬಲ ಗಿಡವನ್ನು ಕಿತ್ತು ತಂದುಕೊಟ್ಟ ಪ್ರಭುಗಳೇ" ಎಂದನು ವೈದ್ಯ.

"ಹಾಗಾದರೆ ನೀವು ತಪ್ಪಿದಿರಿ" ಎಂದುಕೊಂಡು ರಾಜನು ಆ ಸೇವಕನನ್ನು ತನ್ನ ಬಳಿಗೆ ಕೂಡಲೇ ಕರೆಯಿಸಿ, "ಎಲೋ, ಮೊನ್ನೆ ನೀನು ಅಡವಿಯಿಂದ ಎಬ್ಬಿಸಿಕೊಂಡು ಬಂದ ಸಾವಿರ ಚಿನ್ನದ ನಾಣ್ಯಗಳನ್ನು ಏನು ಮಾಡಿದಿ?" ಎಂದು ಕೇಳಿದನು.

ಅದನ್ನು ಕೇಳಿ ಸೇವಕನು ತಬ್ಬಿಬ್ಬಾಗಿ ತೊದಲುತ್ತ, "ನನ್ನ ಮನೆಯಲ್ಲಿ ಅಡಗಿಸಿಟ್ಟಿದ್ದೇನೆ ಪ್ರಭುಗಳೇ!" ಎಂದನು.

"ಅದು ಒಬ್ಬ ಬ್ರಾಹ್ಮಣನದು. ಅವನು ನಮ್ಮ ಭವನದಲ್ಲಿದ್ದಾನೆ. ಕೂಡಲೇ ತಂದು ಅವನಿಗೆ



ಕೊಟ್ಟುಬಿಡು. ಓಡು !" ಎಂದನು ರಾಜ. ಈಗಲೇ ತರುತ್ತೇನೆಂದು ಹೇಳಿ ಸೇವಕನು ನಮಸ್ಕಾರಮಾಡಿ ಹೊರಟು ಹೋದನು.

ಇದನ್ನು ನೋಡಿಕೊಂಡೇ ಇದ್ದ ಮಂತ್ರಿಗೆ, ರಾಜನು ಹೇಗೆ ಆ ಧನ ಕದ್ದವನನ್ನು ಗುರುತಿಸಿದ ನೆಂಬುದು ಅರ್ಥವಾಗಲಿಲ್ಲ. ಕುತೂಹಲವನ್ನು ಹತ್ತಿಕ್ಕಿ ಕೊಳ್ಳಲಾಗದೆ, "ಮಹಾರಾಜರೇ, ಈ ಕಳ್ಳತನವನ್ನು ನೀವು ಹೇಗೆ ಕಂಡುಹಿಡಿದಿರೆಂದು ಗೊತ್ತಾಗಲಿಲ್ಲ. ಆ ಸೇವಕನೇ ತೆಗೆದನೆಂದು ಹೇಗೆ ಕಂಡುಹಿಡಿದಿರೋ ? " ಎಂದು ಕೇಳಿದನು.

ರಾಜನು ಮುಗುಳು ನಗುತ್ತಾ ಹೀಗೆ ವಿವರಿಸಿದನು : "ಕಳ್ಳತನವನ್ನು ಕುರಿತು ಬ್ರಾಹ್ಮಣನು ಹೇಳಿದ ಮಾತು ನಿಜವೆಂದು ನಂಬಿಕೊಂಡೇ ನಾನು ಈ ಕಳ್ಳತನವನ್ನು ಹಿಡಿಯಬೇಕೆಂದು ಆಲೋಚನೆ ಮಾಡಿದೆ. ನಗರದೊಳಗಿರುವ ಲಕ್ಷಗಟ್ಲೆ ಜನರಲ್ಲಿ ಒಬ್ಬನು ಮಾತ್ರವೇ ಅದನ್ನು ಎಬ್ಬಿಸಿಕೊಂಡು ಹೋಗಿರುತ್ತಾನೆ. ಅಲ್ಲಿ ಧನವಿರುವ ಸಂಗತಿ ಯಾರಿಗೂ ಗೊತ್ತಿಲ್ಲವೆಂದು ಬ್ರಾಹ್ಮಣನು ಖಂಡಿತ ಹೇಳುತ್ತಾನೆ. ಆ ಜಾಗದಲ್ಲಿ ಧನವಿದೆಯೆಂಬುದನ್ನು ತಿಳಿಯದೆ ಹೋದರೆ, ಅಲ್ಲಿ ಅಗೆಯಬೇಕಾದ ಅಗತ್ಯ ಯಾರಿಗೆ ತಾನೇ ಬಂದೀತು ? ನಾಗಬಲ ಗಿಡದಿಂದ ಕೆಲಸವಿರುವವನಿಗೇ ಅಂಥ ಅಗತ್ಯ ಬರುತ್ತದೆ.

"ಆ ಪ್ರಾಂತದಲ್ಲೆಲ್ಲಿಯೂ ನಾಗಬಲ ಗಿಡ ಬೇರೊಂದಿಲ್ಲವೆಂದು ಬ್ರಾಹ್ಮಣ ಹೇಳುತ್ತಾನೆ. ಅವನು ಹೇಳುವ ಮಾತು ನಿಜವೆಂದು ನನ್ನ ಸೇವಕನೂ ಹುಡುಕಿ ಬಂದು ಹೇಳಿದ. ಅಲ್ಲದೆ ಅಲ್ಲಿ ಧನವಿದೆಯೆಂದು ಯಾವನಾದರೂ ಹೇಗೋ ತಿಳಿದಿದ್ದರೆ, ಅವನು ಧನಕ್ಕಾಗಿಯೇ ಅಲ್ಲಿ ಅಗೆದು, ನಾಗಬಲ ಗಿಡವನ್ನು ಅಲ್ಲೇ ಬಿಸುಟು ಹೋಗುತ್ತಾನೆ, ನಾಗಬಲಕ್ಕಾಗಿ ಅಲ್ಲಿ ಅಗೆದವನೇ, ಅದನ್ನೂ, ಅದರೊಂದಿಗೆ ಸಿಕ್ಕಿದ ಧನವನ್ನೂ ಎತ್ತಿಕೊಂಡು ಹೋಗಿದ್ದಾನೆಂದು ಗೊತ್ತಾಯಿತು.

"ಹಾಗಾದರೆ ನಾಗಬಲದ ಗಿಡಬೇರುಗಳಿಂದ ಯಾರಿಗೆ ಉಪಯೋಗವಿದ್ದೀತು ? ಅದು ಮೂಲಿಕೆ ಯಾದುದರಿಂದ ವೈದ್ಯನಿಗೇ ಅದು ಬೇಕಾಗಿರುತ್ತೆ. ಅಂತೆಯೇ ವೈದ್ಯರನ್ನೆಲ್ಲಾ ಬರಮಾಡಿ ವಿಚಾರಣೆ ನಡೆಸಿದೆ. ನಾಗಬಲವನ್ನು ಉಪಯೋಗಿಸಿ ಚಿಕಿತ್ಸೆ ಮಾಡುವ ವೈದ್ಯನು ದೊರಕಿದ ಕೂಡಲೇ ಕಳ್ಳನೂ ಸಿಕ್ಕಿದನು. ಇದರಲ್ಲಿ ಹೆಚ್ಚಿನ ರಹಸ್ಯವೇನಿಲ್ಲವಲ್ಲ ? "

ರಾಜನ ಊಹನೆಯನ್ನು ನೋಡಿ ಮಂತ್ರಿ ಮೆಚ್ಚಿ ತಲೆದೂಗಿದನು. ಹೋದ ನಿಧಿ ಕೈಸೇರಿ, ರಾಜನ ರಕ್ಷಣೆಯೂ ದೊರಕಿದುದರಿಂದ, ಆ ಪರದೇಶೀ ಬ್ರಾಹ್ಮಣನು, ಆ ದೇಶದ ಸಂಭಾವಿತ ಗೃಹಸ್ಥನಾಗಿ ಸುಖವಾಗಿರಲು ಸಾಧ್ಯವಾಯಿತು.





# ಇಂದ್ರ

ವೇದ ಪುರಾಣಗಳಲ್ಲಿ 'ಇಂದ್ರ' ಎಂಬ ಮಾತು ತುಂಬಾ ಬರುತ್ತದೆ. ಇಂದ್ರ ಎಂಬವನು ವೇದ ಕಾಲದಲ್ಲಿಯೋ, ಅದಕ್ಕಿಂತಲೂ ಪೂರ್ವದಲ್ಲಿಯೋ ಇದ್ದಿರಬಹುದು. ಕಾಲಕ್ರಮದಲ್ಲಿ ಇಂದ್ರತ್ವ ಎಂಬುದೊಂದು ಪದವಿಯಾಗಿ ಚಲಾವಣೆಗೆ ಬಂದಿತು. ಆ ಪದವಿಯನ್ನು ನಿರ್ವಹಿಸಿದವರಲ್ಲಿ ಸುಶಾಂತ, ವಿಭು, ಮನೋಜವ; ಬೇಗದಲ್ಲೇ ಭ್ರಷ್ಟನಾಗಿ ಹೋದ ನಹುಷನೂ ಇದ್ದಾರೆ. ಇನ್ನೂ ಹಲವರು ಇಂದ್ರತ್ವದಲ್ಲಿ ಇದ್ದಿರಬಹುದು. ನೂರು ಯಾಗಗಳನ್ನು ಮಾಡಿದವರು ಇಂದ್ರ ಪದವಿಗೆ ಅರ್ಹರು.

ಹೀಗೇ ಇಂದ್ರತ್ವದಲ್ಲಿದ್ದವರೆಲ್ಲ ಇಂದ್ರರೆನಿಸಿದರೂ ವೇದಕಾಲದ ಇಂದ್ರನಿಗೂ ಪುರಾಣಕಾಲದ ಇಂದ್ರನಿಗೂ ತುಂಬಾ ವ್ಯತ್ಯಾಸಗಳು ಕಾಣುತ್ತವೆ. ಆದುದರಿಂದ ವೇದಕಾಲದ ಇಂದ್ರನನ್ನು ಕುರಿತೂ, ಪುರಾಣಕಾಲದ ಇಂದ್ರನನ್ನು ಕುರಿತೂ ವಿವರಗಳನ್ನು ಪ್ರತ್ಯ ಪ್ರತ್ಯೇಕವಾಗಿ ತಿಳಿದುಕೊಳ್ಳುವುದು ಒಳ್ಳೆಯದು.

ವೇದಕಾಲದ ಭಾರತೀಯರಿಗೆ ಇಂದ್ರನು ಸರ್ವೋತ್ತಮನಾದ ಆರಾಧ್ಯ ದೈವವಾಗಿರುವನು. ಋಗ್ವೇದದಲ್ಲಿ ಇಂದ್ರನ ಸ್ತುತಿ ಪರವಾಗಿ ಇನ್ನೂರೈವತ್ತು ಸೂಕ್ತಿಗಳಿವೆಯಂತೆ. ಮತ್ತೆ ಐವತ್ತು ಸೂಕ್ತಿಗಳಲ್ಲಿ ಪಾಕ್ಷಿಕವಾಗಿ ಇಂದ್ರನ ಹೊಗಳಿಕೆಯೇ.

ಇಂದ್ರ ಶಬ್ದವು ಆರ್ಯರು ಇರಾನಿನಿಂದ ಭಾರತ ದೇಶಕ್ಕೆ ಬರುವುದಕ್ಕೆ ಮೊದಲೇ ಅಸ್ತಿತ್ವದಲ್ಲಿತ್ತು. "ಇನ" ಅಥವಾ "ಇನ್" ಎಂಬ ಪ್ರಕಾಶ ಶಬ್ದದಿಂದ "ಇಂದ್ರ" ಶಬ್ದ ಹುಟ್ಟಿರಬಹುದು. ಇಂದ್ರನು ಮುಖ್ಯವಾಗಿ ವಜ್ರಧಾರಿಯಾದವನು. ನಗರಗಳನ್ನು ಧ್ವಂಸಮಾಡುವ ಶಕ್ತಿಯುಳ್ಳ ಪುರಂದರನು, ದಾನವರನ್ನು ನಾಶಮಾಡುವವನು. ನೀರುಗಳಿಗಿರುವ ನಿರ್ಬಂಧಗಳನ್ನೆಲ್ಲ ತೊಲಗಿಸುವಂಥವನು.

ವೇದಗಳು ಇಂದ್ರನ ಅಂಗಾಂಗಗಳನ್ನು ಕೂಡಾ ವರ್ಣನೆ ಮಾಡುತ್ತವೆ. ಅವನಿಗೆ ತಲೆಯೂ, ಶರೀರವೂ, ಕೈಗಳೂ ಬಲವಾಗಿರುತ್ತವೆ. ಸೋಮಪಾನವು ಅವನಿಗೆ ತುಂಬಾ ಇಷ್ಟ. ಸೋಮಪಾನ ಮಾಡುವ ಸಂದರ್ಭದಲ್ಲಿ ಅವನ ಉದರಭಾಂಡವು ಹೇಗಾಗುವುದೆಂಬುದನ್ನು ಅನೇಕಸಾರಿ ವರ್ಣಿಸಲ್ಪಟ್ಟಿದೆ. ಅವನ ತುಟಿಗಳು "ಸುಶಿಪ್ರ" ಎಂದು ಪ್ರತ್ಯೇಕವಾಗಿ ವರ್ಣಿಸಲ್ಪಟ್ಟಿವೆ. ಅವನ ಗಡ್ಡವು



ಉದ್ರೇಕವಾದಾಗ ವೇಗವಾಗಿ ಕದಲುತ್ತ ಆಡುವುದಂತೆ. ಅವನ ಕೇಶಗಳು ಕಪಿಲವರ್ಣವಾಗಿರುತ್ತವೆ. ಅವನ ಶರೀರವೇ "ಹರಿವರ್ಣ"ವೆಂದು ಕಪಿಲ ವರ್ಣವನ್ನೇ ಸೂಚಿಸುತ್ತದೆ. ಕೆಲವು ಕಡೆಗಳಲ್ಲಿ ಅವನ ಶರೀರದ ವರ್ಣವು ಬಂಗಾರದ ಛಾಯೆಯೆಂತಲೂ ಹೇಳುತ್ತವೆ. ಅವನ ಕೈಗಳು ದೀರ್ಘವಾದುವು; ಬಲಿಷ್ಠವಾದುವು; ಸುಂದರವಾದುವು. ಅವನು ಕಾಮರೂಪಿಯಾದವನು.

ಇಂದ್ರನ ಪ್ರತ್ಯೇಕ ಶಕ್ತಿಯಾದ ವಜ್ರಾಯುಧವು ತ್ವಷ್ಟನಿಂದಲೋ, ಕಾವ್ಯೋಶನನೆಂಬವನಿಂದಲೋ ಅವನಿಗೆ ಲಭಿಸಿರುತ್ತದೆ. ವಜ್ರಾಯುಧವನ್ನು ಇಂದ್ರನಿಗೆ ದೇವತೆಗಳು ಕೊಟ್ಟರೆಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿರುತ್ತದೆ. ಅವನ ವಜ್ರಾಯುಧದ ವರ್ಣನೆಗಳು ಬಗೆಬಗೆಯಾಗಿವೆ. ಅದು ಲೋಹದಿಂದಾದುದೆಂದು "ಆಯಸಂ" ಎಂಬ ಶಬ್ದದಿಂದ ತಿಳಿಯುತ್ತದೆ. ಬಂಗಾರದಿಂದಾದುದೆಂದೂ ಹೇಳುತ್ತದೆ. ಅದಕ್ಕೆ ನಾಲ್ಕು ಕೋಣಗಳಿರುತ್ತವೆ; ಕೆಲವು ಕಡೆ ನೂರು ಕೋಣಗಳೆಂದೂ ಹೇಳಿದೆ. ಸಾವಿರ ಮೊನೆಗಳಿವೆ. ಹರಿತವಾಗಿದೆ. "ಅಶ್ಮನ್ ಪರ್ವತ" ಎಂದರೆ ಕಲ್ಲಿನಿಂದಾದುದೆಂದೂ ಹೇಳಲ್ಪಟ್ಟಿದೆ.

ಇಂದ್ರನಿಗೆ ಧನುರ್ಬಾಣಗಳು ಕೂಡಾ ಇವೆ. ಬಾಣಗಳು ಬಂಗಾರದುವು. ಅವಕ್ಕೆ ನೂರು ಮೊನೆಗಳಿವೆ. ಸಾವಿರ ಗರಿಗಳಿಂದ ಕೂಡಿದಂಥವು. ಇವು ಮಾತ್ರವಲ್ಲದೆ ಇಂದ್ರನು ಒಂದು ಅಂಕುಶವನ್ನೂ, ಅಥರ್ವವೇದದಲ್ಲಿ ಒಂದು ಬಲೆಯನ್ನೂ ಸಹ ಉಪಯೋಗಿಸಿಕೊಳ್ಳುತ್ತಾನೆ.

ಇಂದ್ರನ ರಥವು ಮನೋವೇಗವನ್ನೂ ಸಹ ಮೀರಿಸುವಂಥಾದ್ದು. "ರಥಸ್ಥಾ" ಎಂಬ ಮಾತನ್ನು ಇಂದ್ರನೆಂಬ ಅರ್ಥದಲ್ಲಿ ಪ್ರತ್ಯೇಕವಾಗಿ ಉಪಯೋಗಿಸಲ್ಪಟ್ಟಿದೆ. ಇಂದ್ರನ ರಥವನ್ನು ಹರಿವರ್ಣವುಳ್ಳ ಎರಡು ಕುದುರೆಗಳು ಎಳೆಯುತ್ತವೆ. ಅಲ್ಲಲ್ಲಿ ಈ ಕುದುರೆಗಳ ಸಂಖ್ಯೆ ನೂರು, ಸಾವಿರ, ಹನ್ನೊಂದು ನೂರು ಎಂದೂ ಹೇಳಲ್ಪಟ್ಟಿದೆ. ರಥವನ್ನೂ, ಕುದುರೆಗಳನ್ನೂ ನಿರ್ಮಿಸಿಕೊಟ್ಟವರು ಋಭುಗಳು.

ದೇವತೆಗಳೆಲ್ಲರೂ ಸೋಮಪಾನ ಮಾಡುವವರೇ ಆದರೂ ಇಂದ್ರನು ಪೂರ್ತಿಯಾಗಿ ಸೋಮಪಾನ ವ್ಯಸನಿಯಾಗಿರುತ್ತಾನೆ. ಕುಡಿಯಲಿಕ್ಕಾಗಿ ಅವನು ಸೋಮವನ್ನು ಕದ್ದುಕೊಂಡನೆಂತಲೂ ಹೇಳಲ್ಪಟ್ಟಿದೆ. ಇಂದ್ರನ ತರುವಾಯ ಹೇಳತಕ್ಕ ಪಾನಪ್ರಿಯನಾದವನೆಂದರೆ ವಾಯುವೇ ಹೊರತು, ದೇವತೆಗಳಲ್ಲಾಗಲಿ, ಮಾನವರಲ್ಲಾಗಲಿ ಮತ್ತೊಬ್ಬರಿಲ್ಲವೆಂದು ಗೊತ್ತಾಗುತ್ತದೆ. ಚೆನ್ನಾಗಿ ಕುಡಿದಾಗ ಇಂದ್ರನು ಅಸಾಧಾರಣವೆನಿಸುವಂತಹ ಶಕ್ತಿ, ಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಾನೆ. ವೃತ್ರನನ್ನು ಕೊಲ್ಲಲಿಕ್ಕೆ ಇಂದ್ರನು "ಮೂರು ಕೆರೆಗಳ" ಸೋಮವನ್ನು ಕುಡಿದನಂತೆ. ಮತ್ತೊಂದು ಸಂದರ್ಭದಲ್ಲಿ ಅವನು ಒಂದೇ ಗುಟುಕಿನಲ್ಲಿ ಮೂವತ್ತು ಕೆರೆಗಳ ಸೋಮವನ್ನು ಕುಡಿದನೆಂದು

ಹೇಳಲ್ಪಟ್ಟಿವೆ. "ಕೆರೆ" ಎಂಬ ಆಳತೆ ಯಾವುದೋ? ಯಥೇಚ್ಛೆಯಾಗಿ ಸೋಮಪಾನ ಮಾಡಿದ ಮೇಲೆ ತನಗೆ ಏನೇನು ಭಾವನೆಗಳು ಬರುತ್ತವೆಂಬುದನ್ನು ಇಂದ್ರನೇ ಸ್ವಯಂ ಒಂದು ಪೂರ್ತಿ ಸೂಕ್ತದಲ್ಲಿ ಹೇಳಿಕೊಂಡಿದ್ದಾನೆ. ಸಾಮಾನ್ಯ ಮನುಷ್ಯರಿಗೆ ಆಗುವ ಹಾಗೆಯೇ ಕುಡಿತದಿಂದಾಗಿ ಇಂದ್ರನಿಗೂ ರೋಗ ಬರುತ್ತದೆ. ಆಗ ಇಂದ್ರನ ಚಿಕಿತ್ಸೆಗಾಗಿ "ಸೌತ್ರಾಮಣಿ" ಎಂಬ ಯಜ್ಞವನ್ನು ಮಾಡಬೇಕಾಯಿತು. ಇಂದ್ರನು ಹಾಲಿನಲ್ಲಿ ಜೇನನ್ನು ಬೆರೆಸಿ ಕೂಡಾ ಕುಡಿಯುತ್ತಾನೆ.

ಇಂದ್ರನು ಎತ್ತಿನ ಮಾಂಸವನ್ನೂ, ಎಮ್ಮೆಯ ಮಾಂಸವನ್ನೂ ತಿನ್ನುವನು. ಅವನು ನೂರು ಎಮ್ಮೆಗಳನ್ನೂ, ಇನ್ನೊಮ್ಮೆ ಮುನ್ನೂರು ಎಮ್ಮೆಗಳನ್ನೂ ತಿಂದಿರುವನೆಂದು ಕೂಡಾ ಋಗ್ವೇದದಲ್ಲಿ ಹೇಳಲ್ಪಟ್ಟಿರುವುದನ್ನು ನೋಡಿದರೆ ಅದರ ಪ್ರಾಚೀನತೆಯನ್ನು ಊಹಿಸಬಹುದು.

ಇಂದ್ರನು ತನ್ನ ಜನ್ಮವನ್ನು ಕುರಿತು ಹೇಳಿಕೊಂಡಂತೆ, ಮೂರು ನಾಲ್ಕು ಮಂಡಲಗಳಲ್ಲಿ ಋಕ್ಕುಗಳಿವೆ. ಅವನು ತನ್ನ ತಾಯಿಯ ಗರ್ಭದಿಂದ ಸಹಜವಲ್ಲದ ರೀತಿಯಲ್ಲಿ ಹುಟ್ಟಬೇಕೆಂದು ಇಚ್ಛಿಸಿದನಂತೆ. ಅವನು ಹುಟ್ಟಿದ ಕೂಡಲೇ ಆಕಾಶವೆಲ್ಲಾ ತೇಜೋವಂತವಾಯಿತು. ಹುಟ್ಟಿ ಹೊರಬಂದ ಕೂಡಲೇ ಇಂದ್ರನು ಸೂರ್ಯನ ಚಕ್ರವನ್ನು ಹಿಡಿದು ಕದಲಿಸಿ ಯುದ್ಧ ಮಾಡಿದನು. ಅವನ ಪ್ರತಾಪಕ್ಕೆ ಹೆದರಿ ಭೂಮಿಯೂ ಬೆಟ್ಟಗಳೂ ಕಂಪಿಸಿದುವು. ದೇವತೆಗಳೆಲ್ಲರೂ ಅವನನ್ನು ನೋಡಿ ಹೆದರಿದರು. ಅವನನ್ನು ಹಡೆದ ತಾಯಿ ಒಂದು ಹಸುವೆಂತಲೂ ಒಂದು ಕಡೆಯಲ್ಲಿ ಹೇಳಲ್ಪಟ್ಟಿದೆ. ಗೋವಿಗೆ ಹುಟ್ಟಿದ ಕರುವೆನಿಸುವ "ಗಾರ್ಷ್ಟೇಯ" ನಾಗಿದ್ದ ಅವನ ತಾಯಿಯ ಹೆಸರು "ನಿಷ್ಟಗ್ರಿ" ಎಂದು ಕೂಡಾ ಹೇಳಲ್ಪಟ್ಟಿದೆ. ಅದಿತಿ ಎಂದರೆ



ಇವಳೇ ಎಂದು ಸಾಯಣಾಚಾರ್ಯರು ಹೇಳುತ್ತಾರೆ. ಅಥರ್ವ ವೇದದಲ್ಲಿ ಇಂದ್ರನನ್ನೂ ಅಗ್ನಿಯನ್ನೂ ಹಡೆದವಳ ಹೆಸರು, ಪ್ರಜಾಪತಿಯ ಕುಮಾರಿಯಾದ "ಏಕಾಷ್ಟಕ" ಳೆಂದು ಹೇಳಲ್ಪಟ್ಟಿದೆ. ಇಂದ್ರನಿಗೂ ಅಗ್ನಿಗೂ ಒಬ್ಬನೇ ತಂದೆ. ಇಂದ್ರನು ತನ್ನ ತಂದೆಯ ಕಾಲುಗಳನ್ನು ಹಿಡಿದು ಎತ್ತಿ ಅಪ್ಪಳಿಸಿ ಕೊಂದವನೆಂತಲೂ ಹೇಳಲ್ಪಟ್ಟಿದೆ.

ಇಂದ್ರನ ಹೆಂಡತಿಯ ಹೆಸರು ಇಂದ್ರಾಣಿ ಎಂದು ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿದೆ. ಇಂದ್ರನಿಗೆ ಪ್ರಾಸಹಾ, ಸೇನಾ ಎಂಬ ಇಬ್ಬರು ಹೆಂಡಂದಿರು ಇರುವರೆಂದು ಐತರೇಯ ಬ್ರಾಹ್ಮಣದಲ್ಲಿ ಕಾಣುತ್ತದೆ. ವೇದ ಸಂಹಿತೆಗಳಲ್ಲಿಯೂ, ಪುರಾಣಗಳಲ್ಲಿಯೂ ಶಚೀದೇವಿಯೇ ಇಂದ್ರನ ಹೆಂಡತಿ ಎಂದು ಕೆಲವು ಪಂಡಿತರ ಅಭಿಪ್ರಾಯವಾಗಿದೆ. "ವಿಲಿಸ್ತೇಂಗ" ಎಂಬ ದಾನವ ಸ್ತ್ರೀಯನ್ನು ಮೋಹಿಸಿ ಇಂದ್ರನು ಅಸುರರ ನಡುವೆ ಸ್ತ್ರೀಯರ

ಹಿಂದೆ ಸ್ತ್ರೀ ರೂಪದಲ್ಲಿದ್ದನೆಂದೂ, ಪುರುಷರ ನಡುವೆ ಪುರುಷ ರೂಪದಲ್ಲಿದ್ದನೆಂದೂ ಒಂದು ಕಡೆಯಲ್ಲಿ ಹೇಳಲ್ಪಟ್ಟಿದೆ.

ಇಂದ್ರನಿಗೆ ಸನ್ನಿಹಿತರಾಗಿ, ಸಹಚರರಾಗಿ ಇರುವವರು ಮರುತ್ತರು. ಇವರು ಅನೇಕ ಸಾರಿ ಯುದ್ಧಗಳಲ್ಲಿ ಇಂದ್ರನಿಗೆ ಸಹಾಯ ಮಾಡಿದ್ದಾರೆ.

ಕೆಲವು ಸಂದರ್ಭಗಳಲ್ಲಿ ಇಂದ್ರನೇ ಸೂರ್ಯನೆಂದು ಕೂಡಾ ಅಭಿಪ್ರಾಯ ಉಂಟಾಗುತ್ತದೆ: ಒಂದುಸಾರಿ ತಾನೇ ಮನುವೆಂದೂ, ಸೂರ್ಯನೆಂದೂ ಇಂದ್ರನೇ ಹೇಳಿಕೊಳ್ಳುತ್ತಾನೆ.

ಒಟ್ಟಿನ ಮೇಲೆ ಇಂದ್ರನ ಮಹತ್ತನ್ನೂ, ಶಕ್ತಿಯನ್ನೂ ವೇದಗಳಲ್ಲಿ ಅಪರಿಮಿತವಾಗಿ ಹೇಳಲ್ಪಟ್ಟಿವೆ. ಅವನಿಗೆ ಸಮಾನರಾದವರಾರೂ ಹುಟ್ಟಿರಲಿಲ್ಲ, ಹುಟ್ಟುವುದೂ ಇಲ್ಲ. ಯಾವ ದೇವ ಪುರುಷನೂ ಅವನನ್ನು ಮೀರಿಸಲಾರನು. ಅವನಿಗೆ ಸರಿಸಮನೂ ಆಗಲಾರನು. ಇಂದ್ರನ ಪರಾಕ್ರಮವು ಅನನ್ಯವಾದುದು. ಅವನ ಆಜ್ಞೆಗಳನ್ನು ವರುಣನೂ ಸೂರ್ಯನೂ ಸಹಾ ಪಾಲಿಸಿ ತೀರಬೇಕು. ಪ್ರಪಂಚಕ್ಕೆಲ್ಲಾ ಅವನೇ ಅಧಿಪತಿ. "ಶಕ್ರ" ನೆಂದೂ "ಶಚೀವತ" ಅಂದರೆ ಶಕ್ತಿವಂತನೆಂದೂ ಇಂದ್ರನನ್ನು ಅನೇಕಸಾರಿ ಹೇಳಲಾಗಿದೆ. ಕೆಲವು ಕಡೆಗಳಲ್ಲಿ ಅವನನ್ನು "ಅಸುರ"ನೆಂತಲೂ ಸಂಬೋಧಿಸಲ್ಪಟ್ಟಿದೆ. ವೇದ ಕಾಲದ ಪ್ರಾರಂಭ ದಶೆಯಲ್ಲಿ "ಅಸುರ" ಶಬ್ದವು ಗೌರವ ವಾಚಕವಾಗಿ, ಈ ಸಂಬೋಧನೆ ವರುಣನಿಗೂ ಅಗ್ನಿಗೂ ಇದ್ದಿತು.

ಇಂದ್ರನು ಸೋಮಪಾನ ಮಾಡಿದ ಉತ್ಸಾಹದಲ್ಲಿ, ಮರುದ್ಗಣಗಳನ್ನು ಬೆಂಬಲವಾಗಿಟ್ಟುಕೊಂಡು ವೃತ್ರನನ್ನು ಧ್ವಂಸಮಾಡಲು ಹೋಗುತ್ತಾನೆ. ವೃತ್ರನು ನೀರುಬತ್ತಿ ಹೋಗುವಂತೆ ಮಾಡುವ ಗುಣವುಳ್ಳ ರಾಕ್ಷಸನು. "ವೃತ್ರ" ಎಂದರೆ ದಂಡೆ, ಕಟ್ಟು ಎಂದು ಅರ್ಥವಿದೆ. ವೃತ್ರನು ಹಾವಿನ ರೂಪದವನೆಂದೂ ಹೇಳುತ್ತಾರೆ. ಆದುದರಿಂದ ಇಂದ್ರನು ನದಿಗಳ ಅಣೆಗಟ್ಟುಗಳನ್ನು ಧ್ವಂಸಮಾಡಿ ನದೀ ಜಲಗಳಿಗೆ ಬಿಡುಗಡೆ ಮಾಡಿಸಿದನೆಂದು ಊಹಿಸುತ್ತಾರೆ. "ಜಲಗಳ ಸ್ವೇಚ್ಛೆಗೆ ಅಡ್ಡವಾಗಿದ್ದ" ವೃತ್ರನನ್ನು ಇಂದ್ರನು ವಜ್ರಾಯುಧದಿಂದ ಬೆನ್ನಿಗೂ ಮುಖಕ್ಕೂ ಹೊಡೆಯಲು, ನಿರ್ಬಂಧದಲ್ಲಿದ್ದ ನೀರುಗಳು ಸ್ವೇಚ್ಛೆಯಾಗಿ ಪ್ರವಹಿಸಿ ಲೋಕಕ್ಕೆ ಒಳ್ಳೆಯದಾಯಿತೆಂದು ಅರ್ಥವಾಗುತ್ತದೆ. ವೃತ್ರನೊಂದಿಗೆ ಇಂದ್ರನು ಯುದ್ಧಮಾಡಿದನೆಂಬುದು ರಮ್ಯತೆಯ ಕಥೆಯಾಗಿದೆ. ಇಂದ್ರ ಶಬ್ದವು ಮಳೆಯನ್ನು ಸೂಚಿಸುವಂತೆ, ಮಳೆಯ ನೆರೆಯಲ್ಲಿ ಕೊಚ್ಚಿಹೋದ ಪಶುಗಳು ಇಂದ್ರನ ಆಹಾರವಾಯಿತೆಂದರೆ ಮಳೆತಾನೆ?





# ಅಲೆಗ್ಜಾಂಡರ್ ಪುರುರಾಜ

ಕ್ರಿಸ್ತಪೂರ್ವ ೪ ನೇ ಶತಮಾನದಲ್ಲಿ ಮಾಸಿಡೋನಿಯಾದ ರಾಜನಾದ ಯುವಕ ಅಲೆಗ್ಜಾಂಡರ್ ಪ್ರಪಂಚವನ್ನು ಜಯಿಸಬೇಕೆಂದು ಹೊರಟನು. ಹಿಂದೂಕುಷ್ ಪರ್ವತಗಳ ಕಣಿವೆಯ ಮೂಲಕವಾಗಿ ಅವನು ತನ್ನ ಪ್ರಚಂಡ ಸೈನ್ಯವನ್ನು ಸಾಗಿಸಿಕೊಂಡು ಪಂಜಾಬು, ಸಿಂಧೂ ಪ್ರಾಂತಗಳಿಗೆ ಬಂದನು.

ತಕ್ಷಶಿಲೆಯ ರಾಜನಾದ ಆಂಭಿ ಪುರುರಾಜನಿಗೆ ಶತ್ರುವಾಗಿದ್ದನು. ಅವನು ಅಲೆಗ್ಜಾಂಡರನ ಸ್ನೇಹ ಸಂಪಾದಿಸಿಕೊಂಡನು. ಆಗ ಝೀಲಂ, ಚೇನಾಬ್ ನದಿಗಳ ಮಧ್ಯಪ್ರದೇಶಕ್ಕೆ ರಾಜನಾಗಿದ್ದವನು ಧೀರನಾದ ಪುರು.





ಆಂಭಿಯ ಸಹಾಯದಿಂದ ಅಲೆಗ್ಜಾಂಡರನು ತನ್ನ ದೇಶದ ಮೇಲೆ ಯುದ್ಧಕ್ಕೆ ಬರುವನೆಂದು ತಿಳಿದು ಪುರು ಯುದ ಸನ್ನದ್ಧನಾದನು.



ಆ ಕಾಲದಲ್ಲಿ ವಿತಸ್ತಾ ಎಂದು ಹೆಸರು ಪಡೆದಿದ್ದ ಝೀಲಂ ನದಿಯ ಎರಡು ಕಡೆಗಳಲ್ಲಿಯೂ ಉಭಯ ಸೇನೆಗಳು ಸೇರಿದುವು.

ಅಲೆಗ್ಸಾಂಡರ್ ಒಂದು ಉಪಾಯ ಮಾಡಿದನು. ಅವನು ತನ್ನ ಸೇನೆಗಳ ಅತ್ಯಧಿಕ ಭಾಗವನ್ನು ಅನೇಕ ಮೈಲು ದೂರಕ್ಕೆ ಒಯ್ದು ನದಿಯನ್ನು ದಾಟಿಸಿ ಪುರುರಾಜನ ಶಿಬಿರದ ಮೇಲೆ ದಾಳಿ ಮಾಡಿದನು.





ಅಲೆಗ್ಸಾಂಡರ್ ಪುರು ಸೈನ್ಯದಲ್ಲಿದ್ದ ಆನೆಗಳ ಗೋಜಿಗೆ ಹೋಗಲಿಲ್ಲ. ಕಾಲ್ಬಲಗಳನ್ನೇ ರಭಸ ಗೊಳಿಸಿ ದಾಳಿ ಮಾಡಿದನು. ಹಾಗೆ ನಡೆಯುವು ದೆಂದು ಊಹಿಸದಿದ್ದರೂ, ಪುರುರಾಜನು ತನ್ನ ಶಿಬಿರವನ್ನು ವೀರೋಚಿತವಾಗಿ ರಕ್ಷಿಸಿಕೊಳ್ಳುವ ಪ್ರಯತ್ನ ಮಾಡಿದನು.

ಯುದ್ಧವು ಘೋರವಾಯಿತು. ಗಜಬಲಗಳೊಂದಿಗೆ ಹೇಗೆ ಯುದ್ಧ ಮಾಡಬೇಕೆಂದು ಅಲೆಗ್ಜಾಂಡರನಿಗೆ ಅಂಭಿಯೇ ಹೇಳಿಕೊಟ್ಟನು. ಆದರೂ ಅಲೆಗ್ಜಾಂಡರನು ಪುರು ಸೇನೆಗಳ ಧೈರ್ಯಸಾಹಸಗಳಿಗೆ ಆಶ್ಚರ್ಯಪಟ್ಟನು.





ಪುರುರಾಜನು ತನ್ನ ಸೇನೆಗಳಿಗೆಲ್ಲಾ ತಾನೇ ನಾಯಕನಾಗಿದ್ದನು. ಅವನು ಅನೇಕಸಾರಿ ಗಾಯಗೊಂಡರೂ ಸ್ವಲ್ಪವೂ ಹಿಂಜರಿಯಲಿಲ್ಲ. ಅವನ ಸಣ್ಣ ಸೇನೆಯೇ ದೊಡ್ಡದಾದ ಗ್ರೀಕು ಸೇನೆಯೊಂದಿಗೆ ದೀರ್ಘ ಸಂಗ್ರಾಮ ನಡೆಸಿತು.

ಪುರುವಿನ ಸ್ನೇಹಿತರು ಯುದ್ಧವನ್ನು ನಿಲ್ಲಿಸುವಂತೆ ಅವನೊಂದಿಗೆ ಹೇಳಿದರು. ಪುರು ಅದಕ್ಕೆ ಒಪ್ಪದೆಯೇ ಯುದ್ಧ ಮಾಡಿದನು. ಅವನ ಅಂಗರಕ್ಷಕರು ಒಬ್ಬೊಬ್ಬರೇ ಬಿದ್ದರು. ಆದರೂ ಅವನು ಯುದ್ಧ ಮಾಡುವುದನ್ನು ದೂರದಲ್ಲಿ ಅಲೆಗ್ಜಾಂಡರನು ಗಮನಿಸಿಕೊಂಡಿದ್ದನು.





ಅಲೆಗ್ಸಾಂಡರ ಸೇನಾನಿಗಳು ಪುರುವನ್ನು ಸುತ್ತು ಮುತ್ತಿ ಹಿಡಿಯುವ ಸಮಯಕ್ಕೆ, ಅವನ ಶರೀರದ ಮೇಲೆ ಒಂಬತ್ತು ಗಾಯಗಳಿದ್ದುವು. ಆದರೂ ಬಿಡದೆ ಹೋರಾಡುತ್ತ ತನ್ನನ್ನು ಹಿಡಿದವರಲ್ಲಿ ಒಬ್ಬನನ್ನು ಕೊಂದನು.

ಪುರುವಿನ ಕೈಗಳನ್ನು ಬೆನ್ನಿಗೆ ಕಟ್ಟಿ ಅವನನ್ನು ಎಳೆದೊಯ್ದು ಅಲೆಗ್ಸಾಂಡರನ ಮುಂದೆ ನಿಲ್ಲಿಸಿದರು. "ನನ್ನಿಂದ ನೀನು ಏನನ್ನು ಆಶಿಸುವಿ ?" ಎಂದು ಅಲೆಗ್ಸಾಂಡರ್ ಪುರುವನ್ನು ಕೇಳಿದನು. "ಒಬ್ಬ ರಾಜನಿಗೆ ಮತ್ತೊಬ್ಬ ರಾಜನು ತೋರಿಸುವ ಮರ್ಯಾದೆ !" ಎಂದನು ಪುರು.





ಅಲೆಗ್ಸಾಂಡರ್ ಪುರುವನ್ನು ವಿರಾರಿಸುವ ಧೈರ್ಯಶಾಲಿಯನ್ನು ಅದುವರೆಗೆ ಕಂಡಿರಲಿಲ್ಲ. ಮೆಚ್ಚುಗೆಯ ಪರವಶತೆಯಲ್ಲಿ ಅವನು ಪುರು ರಾಜನನ್ನು ಬಿಡುಗಡೆಮಾಡಿಸಿ, ಅವನ ಸ್ನೇಹವನ್ನು ಬಯಸಿದನು. ಅಂತೆಯೇ ಪುರು ರಾಜನು ಸ್ವತಂತ್ರನಾಗಿ ಮತ್ತೆ ಪರಿಪಾಲನೆ ನಡೆಸಿದನು.



# ವರದಕ್ಷಿಣೆ

ಒಂದು ಊರಿನಲ್ಲಿ ಶಾಂತಮ್ಮನೆಂಬ ಒಬ್ಬಳು ಹೆಂಗುಸಿದ್ದಳು. ಅವಳು ಸ್ವಲ್ಪ ಮಟ್ಟಿಗೆ ಧನವಂತಳಾಗಿದ್ದರೂ ಮಹಾ ವಾಚಾಳಿ. ಅವಳ ಬಾಯಿಗೆ ಎಲ್ಲರೂ ಹೆದರುತ್ತಿದ್ದರು. ಗಂಡನನ್ನು ಕಳೆದುಕೊಂಡ ಅವಳಿಗೆ ರಾಮನೆಂಬ ಒಬ್ಬನೇ ಮಗ.

ರಾಮನು ಶಾಂತ ಗುಣದವನಾಗಿ ಒಳ್ಳೆಯ ಸ್ಫುರದ್ರೂಪಿಯಾಗಿಯೂ ಇದ್ದುದರಿಂದ, ಊರೊಳಗಿನ ಅನೇಕರು ಅವನಿಗೆ ಹೆಣ್ಣು ಕೊಡಲು ಮುಂದೆ ಬಂದರು. ಆದರೆ ಶಾಂತಮ್ಮ ತನ್ನ ಮಗನಿಗೆ ಇಪ್ಪತ್ತೈದು ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟರಷ್ಟೇ ಮದುವೆಯ ಮಾತು ಎಂದು ಖಂಡಿತವಾಗಿ ಹೇಳಿಬಿಡುತ್ತಿದ್ದಳು. ಅದರಿಂದ ಕೋಪಗೊಂಡವರು ಬೇರೆ ಊರಿನ ಸಂಬಂಧಗಳು ಅಲ್ಲಿಗೆ ಬಾರದಂತೆ, ಆಕೆಯ ಮೇಲೆ ಇಲ್ಲದ ಹೊಲ್ಲದ ದುಷ್ಪ್ರಚಾರಗಳನ್ನು ಮಾಡುತ್ತಿದ್ದರು.

ಯಾವ ಹೆಣ್ಣಿನ ಕಡೆಯವರೂ ವರಾನ್ವೇಷಣೆಗೆ ಬಾರದಿರುವುದನ್ನು ನೋಡಿ ಶಾಂತಮ್ಮನಿಗೆ ಸಂದೇಹವಾಯಿತು. ಒಂದುದಿನ ಅವಳು ಮಗನನ್ನು ನೋಡಿ, "ಏನೋ ರಾಮಾ, ಇತ್ತೀಚೆಗೆ ನಿನಗಾಗಿ ಯಾರೂ ವಿಚಾರಿಸಲಿಕ್ಕೆ ಬಾರದೆ ನಿಂತು ಹೋಗಿದೆಯಲ್ಲಾ ? ಊರೊಳಗಿನವರು ಏನಾದರೂ ಪುಕಾರೆಬ್ಬಿಸಿದ್ದಾರೇನೋ ? " ಎಂದಳು.

ರಾಮನು ಧೈರ್ಯಮಾಡಿ, "ಮತ್ತೇನಾದೀತಮ್ಮ ? ಅಷ್ಟೊಂದು ಹಣವನ್ನು ಕೇಳಿದರೆ ಊರವರು ಶತ್ರುಗಳಾಗದೆ, ಮಿತ್ರರಾಗಿರುತ್ತಾರೇನು ? " ಎಂದನು.

"ಹೂಂ. ಅದೂ ನಿಜವೇ ? ಹೀಗಿದ್ದರೆ ನೀನೂ ಊರವರೊಂದಿಗೆ ಸೇರಿ ನನ್ನ ಮೇಲೆ ಬೀಳೋ ಹಾಗಿದೆ" ಎಂದು, ಸ್ವಲ್ಪಹೊತ್ತು ಆಲೋಚನೆ ಮಾಡಿ, "ಸರಿಯಪ್ಪ. ಈಸಾರಿ ಬಂದವರ ಹತ್ತಿರ ವರದಕ್ಷಿಣೆಯೇ ಬೇಡವೆಂದು ಸ್ಪಷ್ಟವಾಗಿ ಹೇಳಿಬಿಡುತ್ತೇನೆ" ಎಂದಳು.

ತಾಯಿ ಆ ರೀತಿಯಾಗಿ ತಗ್ಗಿದುದನ್ನು ನೋಡಿ ರಾಮನಿಗೆ ಸಂತೋಷವಾಯಿತು. ಶಾಂತಮ್ಮನ ಗುಣ ಹೇಗಿದ್ದರೂ ಆಕೆಯ ಮಗ ರಾಮನನ್ನು ಕುರಿತು ನೆರೆಯ ಗ್ರಾಮಗಳಲ್ಲಿರುವವರಿಗೆ ಗೊತ್ತಿದ್ದಿತು. ಅಂಥವರಲ್ಲಿ ಗೋಪಾಲಯ್ಯ ಎಂಬವರಿಗೆ ಆರುಮಂದಿ ಹೆಣ್ಣು ಮಕ್ಕಳಿದ್ದರು. ಅವರಲ್ಲಿ

**ಬಿ. ಸರೋಜಿನಿ**



ಕೊನೆಯುವಳಾದ ಸೀತೆ ಉಳಿದವರಿಗಿಂತ ಹೆಚ್ಚಿನ ಸುಂದರ ಹುಡುಗಿ. ಉಳಿದ ಐದುಮಂದಿ ಹೆಣ್ಣು ಹುಡುಗಿಯರಿಗೂ ಸಾಕಷ್ಟು ವರದಕ್ಷಿಣೆ ಕೊಟ್ಟು ಮದುವೆ ಮಾಡಿಬಿಟ್ಟಿದ್ದರು. ಇನ್ನು ಸೀತೆಯ ಮದುವೆಗೆ ವರದಕ್ಷಿಣೆಯಾಗಿ ಕೊಡಲು ಗೋಪಾಲಯ್ಯನ ಹತ್ತಿರ ಏನೂ ಉಳಿದಿರಲಿಲ್ಲ. ಸೀತೆಯ ಸೌಂದರ್ಯವನ್ನು ನೋಡಿ ಯಾವನಾದರೂ ವರದಕ್ಷಿಣೆ ಕೇಳದೆಯೇ ಮದುವೆಯಾಗದೆ ಹೋದಾನೇ ಎಂದು ಅವನು ಆಶೆಯಿಂದಿದ್ದನು. ವರದಕ್ಷಿಣೆ ಇಲ್ಲವೆಂದು ತಿಳಿದು ಬಂದ ಸಂಬಂಧಗಳು ಹಿಂದಿರುಗುತ್ತಿದ್ದುವು,

ಇನ್ನು ಸೀತೆಯ ಮದುವೆ ಹೇಗೋ ಎಂದು ಆಕಾಶ ನೋಡುವ ಗೋಪಾಲಯ್ಯನಿಗೆ ರಾಮನ ಸಂಗತಿ ನೆನಪಿಗೆ ಬಂದಿತು. ಶಾಂತಮ್ಮ ಹೇಗಿದ್ದರೂ ರಾಮನು ಒಳ್ಳೆಯವನೆನ್ನುತ್ತಾರಲ್ಲ ? ನೋಡೋಣವೆಂದುಕೊಂಡು, ಗೋಪಾಲಯ್ಯ ರಾಮನಿಗಾಗಿ ಕನ್ಯೆಯನ್ನು ನೋಡಲು ಬರಬೇಕೆಂದು ಶಾಂತಮ್ಮನಿಗೆ ಆಹ್ವಾನ ಕಳುಹಿಸಿಕೊಟ್ಟನು.

ಅದರಂತೆ ರಾಮನನ್ನು ಕರೆದುಕೊಂಡು ಶಾಂತಮ್ಮ ಗೋಪಾಲಯ್ಯನ ಮನೆಗೆ ಹೋದಳು. ಸೀತೆಯನ್ನು ನೋಡಿದ ಕೂಡಲೇ ರಾಮನಿಗೆ ತುಂಬಾ ಹಿಡಿಸಿ ಹೋಯಿತು. ಈ ಹುಡುಗಿ ತನ್ನ ಮಡದಿಯಾದರೆ ಮಹಾ ಭಾಗ್ಯವೆಂದುಕೊಂಡನು. ಶಾಂತಮ್ಮನಿಗಾದರೆ ಆ ಬಡ ಮನೆಯೇ ಹಿಡಿಸಲಿಲ್ಲ. ಸೀತೆಯ ತಾಯಿಯ ಕೊರಳಿನಲ್ಲಿ ಕರಿಮಣಿತಾಳಿಯ ಹೊರತು, ಕೈಗಳಲ್ಲಿ ಗಾಜಿನ ಬಳೆಗಳ ಹೊರತು ಮತ್ತೇನೂ ಇರಲಿಲ್ಲ. ಆದರೂ ಪರವಾಗಿಲ್ಲವೆಂದುಕೊಂಡು, "ನಮಗೆ ವರದಕ್ಷಿಣೆಯೇ ಬೇಡ" ಎಂದು ಸ್ವಲ್ಪ ತಡೆದು "ಹುಡುಗಿಗೆ ಇಪ್ಪತ್ತು ಪವನು ನಗಗಳನ್ನು ಹಾಕಬೇಕು. ಅಷ್ಟು ಇಲ್ಲದಿದ್ದರೆ ಈ ಸಂಬಂಧ ನಮಗೆ ಬೇಡ" ಎಂದಳು.

ಆಕೆಯ ಮೊದಲನೇ ಮಾತಿನಿಂದ ಅರಳಿದ ಗೋಪಾಲಯ್ಯನ ಮುಖ, ಎರಡನೇ ಮಾತಿನಿಂದ ಸುಟ್ಟ ಗಡಿಗೆಯಂತಾಯಿತು. ರಾಮನು ಬೆಚ್ಚಿಬಿದ್ದನು.

"ನಾನು ಸೋತುಹೋದ ಬಡವನಮ್ಮಾ. ಅಷ್ಟೊಂದು ನಗಗಳನ್ನು ಎಲ್ಲಿಂದ ತರಲಿ ? " ಎಂದನು ಗೋಪಾಲಯ್ಯ. "ನಗನಟ್ಟುಗಳನ್ನು ತಂದು ನನ್ನ ಮೇಲೆ ಸುರೀರಿ ಅಂದೇನೇನು? ನಿಮ್ಮ ಮಗಳಿಗೆ ತಾನೇ ಹಾಕಬೇಕೆಂದೆನು ? ಆಲೋಚಿಸಿಕೊಳ್ಳಿ" ಎಂದು ಹೇಳಿ ಶಾಂತಮ್ಮ "ರಾಮೂ, ಹೋಗೋಣ" ಎಂದು ಮಗನೊಂದಿಗೆ ಹೊರಟುಬಿಟ್ಟಳು.

ಇನ್ನು ಸೀತೆ ತನಗೆ ದಕ್ಕಲಾರಳೆಂದು ತಾಯಿಯನ್ನು ಮನಸ್ಸಿನಲ್ಲೇ ಬೈದುಕೊಳ್ಳುತ್ತ ಅವಳೊಂದಿಗೇ ನಡೆದನು ರಾಮು.

ಹೀಗೆ ನಡೆದ ಸಂಗತಿಯನ್ನು ತಿಳಿದು ಸೀತೆಯ ಅಕ್ಕಂದಿರು ತಮ್ಮ ನಗಗಳನ್ನೆಲ್ಲಾ ಸೀತೆಗೆ ಹಾಕಿ ಮದುವೆಯೊಂದು ಆಗಗೊಳಿಸಿ, ಆಮೇಲೆ

ಶಾಂತಮ್ಮನನ್ನು ಹೇಗೋ ಸರಿಗೊಳಿಸಿ ಆ ನಗಗಳನ್ನು ವಾಪಾಸು ಮಾಡಿಕೊಳ್ಳಬಹುದೆಂದು ತಂದೆಗೆ ಆಲೋಚನೆ ಹೇಳಿದರು.

"ಹಾಗೇ ಮಾಡುವ. ಮುಂದೆ ದೇವರಿದ್ದಾನೆ" ಎಂದುಕೊಂಡು ಗೋಪಾಲಯ್ಯ, 'ನೀವು ಹೇಳಿದ ಹಾಗೆ ನಗಗಳನ್ನು ಮಾಡಿಸಿ ಹಾಕುತ್ತೇನೆ' ಎಂದು ಶಾಂತಮ್ಮನಿಗೆ ಸಮಾಚಾರ ಕಳುಹಿಸಿದನು.

ರಾಮನಿಗೆ ಸೀತೆಯೊಂದಿಗೆ ಮದುವೆಯಾಗಿ ಹೋಯಿತು. ಮೈತುಂಬಾ ಐದು ಮಂದಿ ಅಕ್ಕಂದಿರ ನಗಗಳೊಂದಿಗೆ ಸೀತೆ ಗಂಡನ ಮನೆಗೆ ಪ್ರವೇಶ ಮಾಡಿದಳು. ತನ್ನ ನಗಗಳ ರಹಸ್ಯವನ್ನು ಸೀತೆ ಗಂಡನೊಂದಿಗೆ ಸಹಾ ಹೇಳಲು ಹೆದರಿದಳು.

ತಮ್ಮ ನಗಗಳೇನೂ ಇಲ್ಲದೆ ಹಿಂದಿರುಗಿ ಹೋದರೆ ತಮ್ಮ ಗಂಡಂದಿರು ಕೋಪಿಸುವರೆಂದು ಸೀತೆಯ ಅಕ್ಕಂದಿರು ಭಯಪಡುತ್ತ, ಸೀತೆ ಯಾವಾಗ ಹಿಂಧಿರುಗಿ ಬರುವಳೋ ಎಂದು ಕಾಯುತ್ತ, ಏನೋ ಒಂದು ಕಾರಣ ಹೇಳುತ್ತ ತೌರುಮನೆಯಲ್ಲೇ ಕುಳಿತಿದ್ದರು.

ಆದರೆ ಶಾಂತಮ್ಮ ಸೀತೆಯನ್ನು ತೌರುಮನೆಗೆ ಕಳುಹಿಸಲಿಲ್ಲ. ಅದರೆಡೆಯಲ್ಲಿ ಸೀತೆಗೆ ತಿಂಗಳು ತಪ್ಪಿತು. ಇನ್ನು ಪ್ರಸವ ಕಾಲಕ್ಕೇ ಕಳುಹಿಸುವುದೆಂದು ಶಾಂತಮ್ಮ ಗೋಪಾಲಯ್ಯನ ಮನೆಗೆ ಒಸಗೆ ಕಳುಹಿಸಿದಳು.

ಪ್ರಸವಕಾಲ ಸಮೀಪಿಸುವಾಗ ರಾಮನೇ ಹೆಂಡತಿಯನ್ನು ಕರೆದುಕೊಂಡು ಮಾವನ ಮನೆಗೆ ಹೊರಟನು. ಆಗ ಶಾಂತಮ್ಮ ಸೀತೆಯನ್ನು ನೋಡಿ, "ದಿನಗಳು ಚೆನ್ನಾಗಿಲ್ಲ. ಎಲ್ಲಿ ನೋಡಿದರೂ ಕಳ್ಳತನ ಹೆಚ್ಚಾಗಿದೆ. ನಿನ್ನ ನಗಗಳೆಲ್ಲಾ ಇಲ್ಲೇ ಇರಲಿ. ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟಿರುತ್ತೇನೆ" ಎಂದಳು. ಸೀತೆ ಸ್ತಂಭಿತಳಾದಳು. ತಮ್ಮ ತಮ್ಮ ನಗಗಳಿಗಾಗಿಯೇ ಕಾದಿರುವ ಅಕ್ಕಂದಿರು



ಸೀತೆಯನ್ನು ಬರಿ ಮೈಯಲ್ಲಿ ನೋಡಿ ಏನಂದುಕೊಂಡಾರು! ತಾನೇನು ಉತ್ತರ ಹೇಳುವುದು?

ಹಾಗೇ ಆಯಿತು! ಸೀತೆಯ ಅಕ್ಕಂದಿರು "ಅಯ್ಯೋ! ನಮ್ಮ ಕೊಂಪೆ ಮುಳುಗುತ್ತದಲ್ಲಾ! ನಾವು ನಗಗಳಿಲ್ಲದೆ ಹೋದರೆ ಮನೆಯೊಳಗೆ ಕಾಲಿಡಲು ಬಿಡಲಾರರು!" ಎಂದು ಗೋಳಿಟ್ಟರು.

ಆಗ ಗೋಪಾಲಯ್ಯ ಬೇರೇನೂ ತೋರದೆ ಅಳಿಯ ರಾಮನ ಕೈಗಳೆರಡನ್ನೂ ಗಟ್ಟಿಯಾಗಿ ಹಿಡಿದುಕೊಂಡು, ಕ್ಷಮಿಸುವಂತೆ ಪ್ರಾರ್ಥಿಸುತ್ತ ಸತ್ಯಸಂಗತಿಯನ್ನು ಹೇಳಿಬಿಟ್ಟನು.

ಅದನ್ನು ಕೇಳಿ ರಾಮನು ಬೆರಗಾದನು. ನಡೆದ ಸಮಾಚಾರ ತಾಯಿಗೆ ತಿಳಿದರೆ ತನಗೆ ಸೀತೆಯೊಂದಿಗೆ ಸುಖವಾಗಿರುವ ಸ್ಥಿತಿ ತಾರುಮಾರಾಗುತ್ತದೆ. ತಾಯಿ ಆಕಾಶ ಪಾತಾಳಗಳನ್ನು ಒಂದು ಮಾಡಿಯಾಳು. ಅವನು ಒಂದು ನಿರ್ಣಯಕ್ಕೆ ಬಂದು ಮಾವಯ್ಯನಿಗೆ ಸಮಾಧಾನ ಹೇಳಿ, ತನ್ನ

ಗ್ರಾಮಕ್ಕೆ ಹಿಂದಿರುಗಿ ಹೋದನು. ಒಂದುದಿನ ರಾಮನು ತಾಯಿಯೊಂದಿಗೆ, "ಅಮ್ಮಾ! ನನಗೆ ಸೀತೆಯ ವಿಷಯದಲ್ಲಿ ಕೆಟ್ಟ ಕನಸು ಬಿತ್ತು. ಪ್ರಸವದ ವೇಳೆ ಬೇರೆ! ಒಂದುಸಾರಿ ಹೋಗಿ ನೋಡಿ ಬರುತ್ತೇನೆ." ಎಂದು ಹೇಳಿ ಹೊರಟು ಹೋದನು.

ಮಾರುದಿನ ರಾತ್ರಿ ಒಂದು ಜಾಮ ಕಳೆದ ಮೇಲೆ, ಇನ್ನು ಮಗನು ನಾಳೆಯೇ ಬರುವುದು ಎಂದು ಕೊಂಡು ಶಾಂತಮ್ಮ ಬಾಗಿಲು ಮುಚ್ಚಿ ಮಲಗಿ ಕೊಂಡಳು. ಸ್ವಲ್ಪ ಹೊತ್ತಿನ ಮೇಲೆ ಬಾಗಿಲು ತಟ್ಟಿದ ಸಪ್ಪಳವಾಯಿತು. ಮಗನೇ ಬಂದನೆಂದುಕೊಂಡು ಶಾಂತಮ್ಮ ಬೇಗ ಬಾಗಿಲು ತೆರೆದಳು.

ಒಬ್ಬ ಮುಸುಗಿನ ಕಳ್ಳ ರಭಸದಿಂದ ಒಳಕ್ಕೆ ನುಗ್ಗಿ, ಒಂದು ಕೈಯಿಂದ ಶಾಂತಮ್ಮನ ಬಾಯಿ ಮುಚ್ಚಿ, ಎರಡನೇ ಕೈಯಲ್ಲಿ ಕತ್ತಿಯನ್ನು ತೋರಿಸಿ, "ಕೂಗಿದರೆ ಜಾಗ್ರತೆ! ಕಬ್ಬಿಣದ ಪೆಟ್ಟಿಗೇ ಬೀಗದ ಕೈ ಕೊಡು!" ಎಂದು ಜೋರುಮಾಡಿ, ಶಾಂತಮ್ಮನ ಕೈಕಾಲುಗಳನ್ನು, ಕಟ್ಟಿ ಹಾಕಿ, ಕಬ್ಬಿಣದ ಪೆಟ್ಟಿಗೆ ಯಿಂದ ನಗಗಳನ್ನು ಎತ್ತಿಕೊಂಡು ಓಡಿಹೋದನು.

ಮತ್ತೆ ಸ್ವಲ್ಪ ಹೊತ್ತಾದ ಮೇಲೆ, "ಇದೇ ನಮ್ಮಾ? ಬಾಗಿಲು ಇನ್ನೂ ಹಾಕಲಿಲ್ಲವೇ?" ಎಂದು ಕೇಳುತ್ತಾ ಒಳಗೆ ಬಂದ ರಾಮನು, ತಾಯಿಯ ಸ್ಥಿತಿಯನ್ನು ನೋಡಿ ಗಾಬರಿಯಾಗಿ ಅವಳ ಕಟ್ಟುಗಳನ್ನು ಬಿಚ್ಚಿದನು. ಶಾಂತಮ್ಮ ನಡೆದ ಸಂಗತಿ ಹೇಳಿ ಕಳ್ಳನಿಗೆ ಶಾಪ ಹಾಕತೊಡಗಿದಳು.

"ಕಾಲ ಕೆಟ್ಟದಮ್ಮಾ. ಯಾರೂ ಅಂತ ತಿಳಿಯದೆ ಬಾಗಿಲು ತೆರೀಬಾರದಿತ್ತು!" ಎಂದು ರಾಮನು ಕಬ್ಬಿಣದ ಪೆಟ್ಟಿಗೆಯ ಅರೆಗಳಿಗೆಲ್ಲಾ ಕೈಹಾಕಿ "ನಿನ್ನ ಪುಣ್ಯಾನ್ನು! ನಿನ್ನ ನಗಗಳೆಲ್ಲ ಇಲ್ಲೇ ಇವೆ. ಸೀತೇದೇ ಹೋಯಿತು! ಸುಲಭದಲ್ಲಿ ಸಿಕ್ಕಿದ್ದಷ್ಟೇ ಎತ್ತಿ ಕೊಂಡು ಹೋದ!" ಎಂದನು.

"ಸೀತೆಯೇ ಅವನ್ನೆಲ್ಲ ಹಾಕ್ಕೊಂಡು ಹೋಗಿದ್ರೇ ಒಳ್ಳೇದಿತ್ತು. ಈಗ ಅವಳದು ಮಾತ್ರ ಹೋಯಿ ತೆಂದರೆ ಯಾರು ನಂಬುವರು?" ಎಂದು ಚಿಂತಿಸುತ್ತಾ ಹೇಳಿದ ರಾಮ.

"ಅದೂ ನಿಜವೇ! ನಾವೇನೂ ಅಂಥಾ ಕೈಲಾಗ ದೋರು ಅಂದುಕೊಂಡಾರು ಮತ್ತೆ. ಬೇಗನೇ ಸೀತೆಯ ಹೋದ ನಗಗಳನ್ನೆಲ್ಲಾ ಮಾಡಿಸಿ ಬಿಡೋಣ. ಅವುಗಳು ಕಳುವಾಗಿ ಹೋದ ಸುದ್ದಿ ಯಾರಿಗೂ ತಿಳಿಸ ಬೇಡ." ಎಂದಳು ಶಾಂತಮ್ಮ.

ರಾಮನು ತನ್ನ ಸಾಹಸಕ್ಕೆ ತಾನೇ ಮೆಚ್ಚಿ ಕೊಂಡನು. ಸೀತೆ ಬಾಣಂತನ ಮುಗಿಸಿ ಗಂಡು ಮಗುವನ್ನು ಎತ್ತಿಕೊಂಡು ಬರುವಾಗ, ಅತ್ತೆ ಅವಳ ಮೈತುಂಬಾ ಹೊಸ ನಗಗಳನ್ನು ಅಲಂಕರಿಸಿದಳು.



# ಮೂಢ ನಂಬುಗೆ

ಒಂದು ಊರಿನಲ್ಲಿ ಕೃಷ್ಣಯ್ಯ ಎಂಬ ಧನಿಕರಿದ್ದರು. ಅವರಿಗೆ ಅನೇಕರಿಗಿರುವಂತೆ ಶುಕ್ರವಾರ ದಿನ ಹಣ ಖರ್ಚು ಮಾಡಿದರೆ ಲಕ್ಷ್ಮಿ ನಿಲ್ಲಲಾರಳೆಂಬ ನಂಬುಗೆ ಇದ್ದಿತು. ಅವರ ಹೆಂಡತಿಗೂ ಅದೇ ನಂಬುಗೆ.

ಒಂದು ಸಾರಿ ಕೃಷ್ಣಯ್ಯನಿಗೆ ಕಾಯಿಲೆ ಬಂದಿತು. ರಾಮಾಶಾಸ್ತ್ರಿಗಳ ವೈದ್ಯದಿಂದ ಜ್ವರವು ದಿನದಿಂದ ದಿನಕ್ಕೆ ಜೋರೇ ಆಯಿತು.

ಆಗ ರಾಮಶಾಸ್ತ್ರಿಗಳು, "ಅಯ್ಯಾ, ಇದು ಅಪಾಯಕರವಾದ ವಿಷಜ್ವರ. ಈ ದಿನವೇ ಪಟ್ಟಣದಿಂದ ನಾನು ಕೊಡುವ ಈ ಚೀಟಿನಲ್ಲಿರುವ ಔಷಧ ತರಿಸಿಬಿಡಿ. ಈಗಲೇ ಹಣ ಕೊಟ್ಟು ಬೇಗ ಹಿಂದಿರುಗಿ ಬರುವಂತೆ ಯಾರನ್ನಾದರೂ ಕಳಿಸಿರಿ" ಎಂದರು.

"ಈ ದಿನ ಶುಕ್ರವಾರ. ಹಣ ಖರ್ಚು ಮಾಡಲಾರೆವು!" ಎಂದರು ಕೃಷ್ಣಯ್ಯನೂ ಅವರ ಹೆಂಡತಿಯೂ.

ರಾಮ ಶಾಸ್ತ್ರಿ ತುಸುಕೋಪದಿಂದ, "ಹಾಗಂದರೆ ಹೇಗೆ? ನಾನು ಇಷ್ಟು ದಿನ ಮಾಡಿದ ವೈದ್ಯದ ಹಣ ಈಗಲೇ ನನಗೆ ಬೇಕು. ಮೊದಲು ಅದನ್ನು ಕೊಡಿರಿ. ಮನೆಯಲ್ಲಿ ಖರ್ಚಿಗೆ ಸಹಾ ಇಲ್ಲ!" ಎಂದರು. ಕೃಷ್ಣಯ್ಯ ಉಪಾಯವಿಲ್ಲದೆ ಅವರ ಲೆಕ್ಕದ ಹಣವನ್ನು ಕೊಡಲೇ ಬೇಕಾಯಿತು. ಕೂಡಲೇ ರಾಮಶಾಸ್ತ್ರಿ ಆ ಹಣವನ್ನು ಆಳಿನ ಕೈಗೆ ಕೊಟ್ಟು ಚೀಟಿನೊಂದಿಗೆ ಪಟ್ಟಣಕ್ಕೆ ಕಳುಹಿಸುವುದನ್ನು ನೋಡಿ ಕೃಷ್ಣಯ್ಯ, "ನಿಮ್ಮ ಹಣ ಕೊಡಬೇಡಿ, ನಾನೇ ಕೊಡುತ್ತೇನೆ" ಎಂದು ತಡೆದು, ಹೇಗೂ ವ್ರತಭಂಗವಾಯಿತಲ್ಲಾ ಎಂದುಕೊಂಡು ತಮ್ಮ ಹಣವನ್ನೇ ಕೊಟ್ಟು ಕಳುಹಿಸಿದರು.

ವ್ರತಭಂಗವಾದರೂ ಜ್ವರ ಗುಣವಾಯಿತು.





# ಹೆಂಡತಿಯೋ? ಪಿಶಾಚಿಯೋ?

ಒಂದು ಊರಲ್ಲಿ ಪೂಣಚ್ಚನೆಂಬವನು ಮದುವೆ ಮಾಡಿಕೊಂಡು ಹೆಂಡತಿಯನ್ನು ತನ್ನ ಮನೆಗೆ ಕರೆದು ಕೊಂಡು ಬಂದನು. ಇನ್ನು ತಾನು ಮಾಡುವ ಅರ್ಧ ಕೆಲಸಗಳನ್ನೆಲ್ಲ ತನ್ನ ಹೆಂಡತಿ ಮಾಡುವ ಳೆಂದೂ, ತನಗೆ ಆದಷ್ಟು ಹಗುರಾಗುವುದೆಂದೂ ಪೂಣಚ್ಚನು ಅಂದುಕೊಂಡುದೆಲ್ಲವೂ ತಲೆಕೆಳ ಗಾಯಿತು. ಅವನ ಹೆಂಡತಿ ಶುದ್ಧ ಸೋಮಾರಿ ಹುಡುಗಿ ಎಂದು ಎರಡು ದಿನಗಳಲ್ಲಿ ತಿಳಿದು ಹೋಯಿತು. ಬೆಳಗು ಮುಂಜಾನೆ ಹಾಲಿನವನು ಕರೆಯುವಾಗ ಅವಳು ಎದ್ದು ಹೋಗಲಿಲ್ಲ. ಅವನೇ ಎದ್ದುಹೋಗಿ ಹಾಲನ್ನು ತೆಗೆದುಕೊಂಡನು. ಆಮೇಲೆ ಯಂತ್ರದ ಹಾಗೇ ಅವನ ನಿತ್ಯಕಾರ್ಯಗಳನ್ನು ಅವನೇ ಮಾಡಿಕೊಂಡನು. ಕಡೆಗೆ ಅವನೇ ತಂಗಳನ್ನ ಬಡಿಸಿಕೊಂಡು ಉಂಡು ಹೊಲದ ಕಡೆಗೆ ಹೊರಡು ವಾಗ ಅವನ ಹೆಂಡತಿ ಸಾವಿತ್ರಿ ನಿದ್ದೆಯಿಂದೆದ್ದು ಆಕಳಿ ಸುತ್ತ ಬಚ್ಚಲು ಮನೆಗೆ ಹೋಗುವಳು. ಆಮೇಲೆ ಬೇಕೂಬೇಡದ ಬೇಸರದಲ್ಲೇ ಅಡಿಗೆಯೊಂದು ಮಾಡು ವಳು. ಹೊತ್ತು ತಪ್ಪದೆ ತಾನು ಊಟ ಮುಗಿಸಿ ಗಂಡನದನ್ನು ಮುಚ್ಚಿಟ್ಟು ಭುಕ್ತಾಯೂಸ ಪರಿಹಾರ ಕ್ಕಾಗಿ ಮಲಗಿರುವಳು. ಪೂಣಚ್ಚ ಬಿಸಿಲಿನಲ್ಲಿ ಬೆವರು ಸುರಿಸಿಕೊಂಡು ಮನೆಗೆ ಬಂದು ತಾನೇ ಬಡಿಸಿಕೊಂಡು ಊಟಮಾಡಿ, ಸ್ವಲ್ಪಹೊತ್ತು ತಲೆ ಅಡ್ಡವಿಟ್ಟು ಕೊಂಡು ಮತ್ತೆ ಕೆಲಸಕ್ಕೆ ಹೋಗಿಬಿಡುವನು. ರಾತ್ರಿ ಅವನು ಮನೆಗೆ ಹಿಂದಿರುಗುವುದರೊಳಗೆ ಸಾವಿತ್ರಿ ತನ್ನ ಊಟ ಮುಗಿಸಿ ನೆರೆಕೆರೆಯವರೊಂದಿಗೆ ಹರಟೆ ಯಲ್ಲಿರುವಳು.

ಪೂಣಚ್ಚನ ತಾಯಿತಂದೆಯರೂ ಇತರ ಬಂಧು ಗಳೂ ಸ್ವಂತ ಊರಿನಲ್ಲಿದ್ದರು. ಕಾರಣಾಂತರದಿಂದ ಪೂಣಚ್ಚನೊಬ್ಬನೇ ಪ್ರತ್ಯೇಕವಾಗಿ ಬದುಕಿಕೊಂಡಿ ದ್ದನು. ಐದು ದಿನಗಳಷ್ಟು ದೂರದ ಪೇರಳಪುರದ ಸಾವಿತ್ರಿಯ ಸೌಂದರ್ಯವನ್ನು ನೋಡಿ, ತಂದೆ ತಾಯಿಗಳಿಗೆ ಒಬ್ಬಳೇ ಮಗಳಾದ ಅವಳನ್ನು ಮೆಚ್ಚಿ ಮದುವೆಯಾಗಿದ್ದನು.

ಕೆಲವು ತಿಂಗಳ ಮೇಲೆ ಮಗಳನ್ನು ಕಳುಹಿಸಿ ಕೊಡುವಂತೆ ಸಾವಿತ್ರಿಯ ತಂದೆತಾಯಿಗಳಿಂದ ಪೂಣಚ್ಚನಿಗೆ ಸಮಾಚಾರ ಬಂದಿತು. ಪೂಣಚ್ಚನು ಹೆಂಡತಿಯನ್ನು ಕರೆದುಕೊಂಡು ಹೋಗಿ ಅವಳ ತೌರಿನಲ್ಲಿ ಬಿಟ್ಟುಬಂದನು. ಹೋಗಿಬರಲು ದಾರಿ

**ಆರ್. ಸತ್ಯನಾರಾಯಣ**



ಯಲ್ಲಿ ಕಳೆದ ಹತ್ತು ದಿನಗಳು ಮಾತ್ರವಲ್ಲದೆ ಅತ್ತೆ ಮಾವಂದಿರ ಒತ್ತಾಯದಿಂದ ಅಲ್ಲಿ ಮೂರು ದಿನ ಅವನು ಉಪಚಾರ ಹೊಂದುತ್ತ ಇರಬೇಕಾಯಿತು. ಹಾಗೆ ಅವನು ಹಿಂದಿರುಗಿ ತನ್ನ ಮನೆಗೆ ಬಂದಾಗ ಎಲ್ಲಾ ಕೆಲಸ ಅಸ್ತವ್ಯಸ್ತವಾಗಿತ್ತು. ಅವುಗಳನ್ನು ಒತ್ತರೆಮಾಡಿ ಸರಿದಾರಿಗೆ ತರಲು ಒಂದು ವಾರ ದಿನಗಳು ಬೇಕಾದುವು.

ಅನಂತರ ಹತ್ತು ದಿನಗಳ ಮೇಲೆ ಏನೋ ಒಂದು ಕೆಲಸದ ಮೇಲೆ ಪೂಣಚ್ಚನು ಯಾವುದೋ ಒಂದು ಗ್ರಾಮಕ್ಕೆ ಹೋಗಿ ಹಿಂದಿರುಗಿ ಬರುತ್ತಿದ್ದನು. ಆಗ ದಾರಿಯಲ್ಲಿ ಸಾವಿತ್ರಿ ಕೈಯಲ್ಲೊಂದು ಹೊಸ ಪೆಟ್ಟಿಗೆ ಯೊಂದಿಗೆ ನಡೆಯುತ್ತಾ ಬರುವುದನ್ನು ನೋಡಿ ಆಶ್ಚರ್ಯಪಟ್ಟನು.

ಅವನು ಬೇಗಬೇಗನೇ ಅವಳ ಬಳಿಗೆ ಹೋಗಿ "ಜತೆಗೆ ಯಾರೂ ಇಲ್ಲದೆ ಹೋಗಿದ್ದರೆ ನನಗೆ ಸುದ್ದಿ ಕಳುಹಿಸಬಹುದಿತ್ತು." ಎಂದನು.

"ಹಾಗೇನೂ ಭಯವಿಲ್ಲ ಬಿಡೀ. ನಿಮ್ಮನ್ನು ಬಿಟ್ಟು ಅಲ್ಲಿ ಇರಲು ಸಾಧ್ಯವಾಗಿಲ್ಲ. ಇಲ್ಲಿಗೆ ಸಮೀಪದ ಊರಿನವರೆಗೆ ಬರುವವರಿದ್ದರು. ಆಮೇಲೆ ಸಮೀಪ ತಾನೇ, ಒಬ್ಬಳೇ ಹೋಗುತ್ತೇನೆ ಭಯವೇನಿಲ್ಲ ಅಂತ ಅವರಿಗೆ ಹೇಳಿ ಹೀಗೆ ಬಂದೆ. ಈಗ ನೀವೂ ಜತೆ ಸಿಕ್ಕಿದಿರಲ್ಲ!" ಎಂದಳು ಸಾವಿತ್ರಿ.

ಪೂಣಚ್ಚನಿಗೆ ಸಂತೋಷವೇ ಆಯಿತು. ಇಬ್ಬರೂ ಅದೂ ಇದೂ ಮಾತಾಡುತ್ತ ಮನೆಗೆ ತಲಪಿದರು. ಈಗ ಸಾವಿತ್ರಿ ಮೊದಲಿನ ಸೋಮಾರಿ ಸಾವಿತ್ರಿ ಯಾಗಿರಲಿಲ್ಲ. ಚುರುಕಾಗಿ ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದಳು. ಈಗ ಅವಳು ಮಾಡುವ ಅಡಿಗೆ ಇಷ್ಟು ರುಚಿಯಾಗಿರುವಂತೆ ಈ ಮೊದಲು ಪೂಣಚ್ಚ ನಿಗೆ ತೋರಿರಲಿಲ್ಲ. ಅವನಿಗೆ ಆನಂದವೂ ಆಶ್ಚರ್ಯವೂ ಉಂಟಾಗುವಂತಿತ್ತು ಅವಳ ಚಟುವಟಿಕೆಗಳು. ಬೆಳಿಗ್ಗೆ ಪೂಣಚ್ಚನಿಗೆ ಎಚ್ಚರಿಕೆಯಾಗುವುದಕ್ಕೆ ಮೊದಲೇ ಅವಳು ಎದ್ದು ಹೋಗಿರುತ್ತಿದ್ದಳು. ಹಾಲು ತೆಗೆದುಕೊಳ್ಳುವಲ್ಲಿಂದ ಹಿಡಿದು ಅವನು ಮಾಡುವ ಎಲ್ಲಾ ಕೆಲಸಗಳನ್ನೂ ಮಾಡಿರುತ್ತಿದ್ದಳು. ಅವನಿಗೆ ಯಾವ ಮನೆಗೆಲಸವೂ ಉಳಿದಿರಲಿಲ್ಲ. ಎಲ್ಲಾ ಶುಭ್ರ, ಚೊಕ್ಕಟ, ಚೆಂದ. ಅವನು ಹೊಲದ ಕೆಲಸಕ್ಕೆ ಹೊರಡಲು ಸಿದ್ಧನಾಗಿ, ತಂಗಳನ್ನು ಉಣ್ಣುವಾಗ ಅವಳು ಪಕ್ಕದಲ್ಲೇ ಕುಳಿತು ಮಧುರವಾಗಿ ಮಾತಾಡುವಳು.

ಸಾವಿತ್ರಿಯಲ್ಲಿ ಉಂಟಾದ ಮಾರ್ಪಾಟುಗಳನ್ನು ನೋಡಿ ಪೂಣಚ್ಚನು ಸಂತೋಷದಿಂದ ತಬ್ಬಿಬ್ಬಾದನು. ಗಂಡನಿಗೆ ಹಿಡಿಸುವಂತೆ ಬಗೆಬಗೆಯಾಗಿ ಅಡಿಗೆ ಮಾಡುತ್ತ, ನಿಜಕ್ಕೂ ಅವನ ಅರ್ಧಾಂಗಿಯೇ ಅನಿಸುವ ಸಾವಿತ್ರಿಯಿಂದ ತನ್ನ ಜನ್ಮ ಸಾರ್ಥಕ ವಾಯಿತೆಂದು ತುಂಬ ಉತ್ಸಾಹಿತನಾದನು ಪೂಣಚ್ಚ.

ಒಂದು ದಿನ ಅರ್ಧ ರಾತ್ರಿಯ ಹೊತ್ತಿನಲ್ಲಿ ಪೂಣಚ್ಚನಿಗೆ ಯಾವುದಕ್ಕೋ ಎಚ್ಚರವಾಯಿತು.



ಹೆಂಡತಿ ಮಲಗಿದ್ದ ಜಾಗ ಖಾಲಿಯಾಗಿತ್ತು. ಅವನು ಆಶ್ಚರ್ಯಪಡುತ್ತ ಮಂಚದಿಂದೆದ್ದು ಕಿಟಕಿಯ ಮೂಲಕ ಹೊರಗೆ ನೋಡಿದನು. ಹಿಟ್ಟು ಚೆಲ್ಲಿದಂತೆ ಬಿದ್ದಿದ್ದ ಬೆಳುದಿಂಗಳಿನಲ್ಲಿ ಸಾವಿತ್ರಿ ಸ್ಪಷ್ಟವಾಗಿ ಕಾಣಿಸಿದಳು. ಆದರೂ ಪೂಣಚ್ಚನಿಗೆ ತನ್ನ ಕಣ್ಣುಗಳನ್ನು ನಂಬಲು ಸಾಧ್ಯವಾಗಲಿಲ್ಲ. ಸಾವಿತ್ರಿ ಅಂಗಳದ ನಡುವಿನಲ್ಲಿ ನಿಂತು ಕೈಗಳನ್ನು ಆಡಿಸುತ್ತಿದ್ದಳು. ಆಗ ಬಕೇಟು ತನ್ನಂತೆಹಾರಿ ಬಾವಿಯೊಳಗೆ ಹೋಗಿ, ನೀರಿನೊಂದಿಗೆ ಮೇಲೆ ಬಂದು ತೊಟ್ಟಿಯೊಳಗೆ ಸುರಿಯುತ್ತಿತ್ತು. ತೊಟ್ಟಿ ತುಂಬಿದ ಮೇಲೆ ಗೋಡೆಯ ಮೂಲೆಯಲ್ಲಿದ್ದ ಕಸಪೊರಿಕೆ ಹಾರಿಬಂದು ಅದರಷ್ಟಕೆ ಅದೇ ಅಂಗಳವನ್ನೆಲ್ಲಾ ಕಸ ಗುಡಿಸುತ್ತಿದ್ದಿತು. ದಿನಾ ಅರ್ಧರಾತ್ರಿಯಲ್ಲೇ ಈ ಕೆಲಸವೆಲ್ಲಾ ಮುಗಿಸುತ್ತಾಳೆ ಎಂದಾಯಿತು.

ಆ ದೃಶ್ಯವನ್ನು ನೋಡಿ ಪೂಣಚ್ಚನ ಶರೀರವು ಭಯದಿಂದ ಬೆವರಿತು! ಹಾಗೆಯೇ ಮರಗಟ್ಟಿ ನಿಂತನು. ಸಾವಿತ್ರಿ ಎಲ್ಲ ಕೆಲಸಗಳನ್ನೂ ಮುಗಿಸಿ ಒಳಗೆ ಬರುವುದನ್ನು ನೋಡಿ, ಅವನು ತಟ್ಟನೆ ಹಿಂದಿರುಗಿ ತನ್ನ ಮಂಚದಲ್ಲಿ ಬಿದ್ದುಕೊಂಡು ನಿದ್ದೆ ಮಾಡುವವನಂತೆ ನಟಿಸಿದನು.

ಪೂಣಚ್ಚನು ತನ್ನೊಳಗೇ ಒಂದು ನಿಶ್ಚಯಕ್ಕೆ ಬಂದನು. ಯಾವನಾದರೂ ಭೂತವೈದ್ಯನನ್ನು ನೋಡಿ ಇದೇನು ವಿಷಯವೋ ಕೇಳಬೇಕೆಂದು ಕೊಂಡನು. ಬೆಳಗಾಗಿ ಎಂದಿನಂತೆ ಹೊಲದ ಕೆಲಸಕ್ಕೆ ಹೊರಟು ಅವನು ಭೂತವೈದ್ಯನನ್ನು ನೋಡಲು ಪಕ್ಕದ ಗ್ರಾಮಕ್ಕೆ ಹೋಗುವಾಗ, ಕಾಲುವೆ ಕಟ್ಟದ ದಾರಿಯಲ್ಲಿ ಪೇರಳಪುರದಿಂದ ಈಕಡೆಗೇ ಬರುತ್ತಿರುವ ತನ್ನ ಮಾವಯ್ಯ ಶರಣಯ್ಯನನ್ನು ನೋಡಿದನು.

"ಏನು ಮಾವಯ್ಯಾ, ಹೀಗೆ ಬರುತ್ತಿದ್ದೀರಿ? ಅತ್ತೆ ಕ್ಷೇಮತಾನೇ? ನೀವು ಬರುವ ಸಮಾಚಾರ ಕೂಡಾ ತಿಳಿಸಲಿಲ್ಲ. ಥಕ್ಕನೆ ಅಪ್ಪ ಬಂದದ್ದು ನೋಡಿ ಇವತ್ತು ಸಾವಿತ್ರಿಗೆ ಆಶ್ಚರ್ಯವಾಗಲಿಕ್ಕಿದೆ!" ಎನ್ನುತ್ತ ಪೂಣಚ್ಚ ಶರಣಯ್ಯನ ಬಳಿಗೆ ಬಂದನು.

"ಸಾವಿತ್ರೀ ಆಶ್ಚರ್ಯಪಡುತ್ತಾಳೆಂದೆಯಾ? ಅಂದರೆ ನಿನ್ನ ಮಾತೇ ಅರ್ಥವಾಗುವುದಿಲ್ಲ." ಎಂದ ಶರಣಯ್ಯ ಕಕ್ಕಾಬಿಕ್ಕಿಯಾದವನಂತೆ.

"ಬನ್ನಿ ಬನ್ನಿ! ಮೊದಲು ಮನೆಗೆ ಬನ್ನಿ. ಎಲ್ಲಾ ಆಮೇಲೆ ಮಾತಾಡೋಣ" ಎಂದು ಪೂಣಚ್ಚ ತನ್ನ ಮಾವಯ್ಯನನ್ನು ಕರೆದುಕೊಂಡು ಮನೆಗೆ ಬಂದನು. ಅವನು ಬಾಗಿಲು ತಟ್ಟಿದ ಕೂಡಲೇ ಸಾವಿತ್ರಿ ಬಾಗಿಲು ತೆರೆದಳು. ಅವಳನ್ನು ನೋಡಿದ ಕೂಡಲೇ ಶರಣಯ್ಯ "ಅಮ್ಮಾ! ಸಾವಿತ್ರೀ!" ಎಂದು ಕೂಗಿ ತಲೆತಿರುಗಿ ಬಿದ್ದುಬಿಟ್ಟನು. ಅವನ ಕೆಟ್ಟ ಕೂಗನ್ನು ಕೇಳಿ ನಾಲ್ಕಾರು ಮಂದಿ ಓಡಿಬಂದು ಕೂಡಿದರು. ಮುಖಕ್ಕೆ ನೀರು ತಳಿದು ಸ್ವಲ್ಪ ಶೈತ್ಯೋಪಚಾರ ಮಾಡಿದ ಮೇಲೆ ಶರಣಯ್ಯ ಎಚ್ಚರಕ್ಕೆ ಬಂದು, "ಅಮ್ಮಾ ಸಾವಿತ್ರೀ! ನೀನು

ಹೇಳಿದ ಮಾತು ನಡೆಸೇ ಬಿಟ್ಟೆಯಾ ? " ಎಂದನು. ಈ ಮಾತು ಯಾರಿಗೂ ಅರ್ಥವಾಗಲಿಲ್ಲ.

"ನನ್ನ ಸಾವಿತ್ರಿ! ನನ್ನ ಬಂಗಾರು ಸಾವಿತ್ರಿ! ಸತ್ತು ಹೋದಳೆಂದುಕೊಂಡೆ ! ಎಲ್ಲಿದ್ದಾಳೆ ? ಮೊದಲು ಅವಳನ್ನು ನೋಡಬೇಕು. ಸಾವಿತ್ರೀ !" ಎನ್ನುತ್ತ ಶರಣಯ್ಯ ಒಳಕ್ಕೆ ಹೋದನು. ಅವನ ಜತೆಯಲ್ಲೇ ಎಲ್ಲರೂ ಒಳಕ್ಕೆ ಹೊಕ್ಕರು.

ಸಾವಿತ್ರಿ ಮಂಚದ ಮೇಲೆ ಎಚ್ಚರವಿಲ್ಲದೆ ಬಿದ್ದುಕೊಂಡಿದ್ದಳು. ಕೆಲವರು ಮುಖಕ್ಕೆ ನೀರು ಚಿಮುಕಿಸಿ ತಣ್ಣೀರು ತಡವಿದರು. ಮೆಲ್ಲನೆ ಎಚ್ಚೆತ್ತು ಕಣ್ಣು ಬಿಡಿಸಿದ ಸಾವಿತ್ರಿ, ಸುತ್ತಲೂ ನೋಡುತ್ತ, "ನಾನು ಇಲ್ಲಿಗೆ ಹೇಗೆಬಂದೆ ?" ಎಂದು ಕೇಳಿದಳು.

"ನನ್ನನ್ನು ನೋಡಮ್ಮ ! ನಾನು ನಿನ್ನ ಅಪ್ಪ !" ಎಂದು ಅವಳ ಕಡೆಗೆ ಬಾಗಿದನು ಶರಣಯ್ಯ.

ಸಾವಿತ್ರಿ ಪೂಣಚ್ಚನನ್ನು ನೋಡಿ, "ಏನಾಯಿತು ಇಲ್ಲಿ ? ಏನು ಇದೆಲ್ಲಾ ? ಯಾಕೆ ಇಷ್ಟು ಜನರು ಬಂದಿದ್ದಾರೆ ? ಎಂದಳು.

ಪೂಣಚ್ಚನಿಗೂ ಹಾಗೇ ಆಗಿತ್ತು. ಏನು ಹೇಳಲೂ ತೋರದೆ ಬೆಪ್ಪುಬಡೆದಂತೆ ಮಾವಯ್ಯನ ಮುಖವನ್ನು ಪಿಳಿಪಿಳಿ ನೋಡಿದನು. ಆಗ ಶರಣಯ್ಯ ಹೀಗೆಂದನು :

"ಪೂಣಚ್ಚಾ, ಸಾವಿತ್ರೀ ! ಏನೂ ಗಾಬರಿಯಾಗಬೇಡಿ. ಅಸಲು ವಿಷಯ ನಾನು ಹೇಳುತ್ತೇನೆ. ನೀನು ಸಾವಿತ್ರಿಯನ್ನು ನಮ್ಮಲ್ಲಿ ಬಿಟ್ಟು ಹೋದ ಮೇಲೆ ಎರಡು ದಿನಗಳ ತರುವಾಯ, ನಾನೂ ನಿನ್ನ ಅತ್ತೆಯೂ ಸಾವಿತ್ರಿಯೂ ಕೂಡಿ ಪಕ್ಕದ ಊರಿನ ಸಂತೆಗೆ ಹೋದೆವು. ನಾವು ಹಿಂದಿರುಗಿ ಬರುವಾಗ ಸಾವಿತ್ರಿ ಹಾಸ್ಯ ರೀತಿಯಲ್ಲಿ ಹೇಳುವ ಮಾತುಗಳಿಂದ ಅವಳು ನಿನ್ನನ್ನು ಸುಖಪಡಿಸುವುದಿಲ್ಲವೆಂಬುದು ನಮಗೆ ಅರ್ಥವಾಯಿತು. ಅವಳು ರಾಣೀ ಹಾಗೆ ಮಲಗಿರುವುದೂ,ನೀನೇ ಎಲ್ಲಾಕೆಲಸ ಮಾಡಿ ದಣಿಯುವುದೂ ಅರ್ಥವಾಯಿತು ನಮಗೆ. ಅವಳ ಪ್ರವರ್ತನೆಯನ್ನು ಖಂಡಿಸಿ ನಾನೂ ಅವಳ ತಾಯಿಯೂ ಅವಳಿಗೆ ಬುದ್ಧಿ ಹೇಳುತ್ತಾ ಊರ ಹೊರಗಿನ ಒಂದು



ಸ್ಮಶಾನದ ದಾರಿಯಿಂದಾಗಿ ನಡೆಯುತ್ತಿದ್ದೆವು. ಅಕಸ್ಮಾತ್ತಾಗಿ ಸಾವಿತ್ರಿ ಹೊಸಬಳಾಗಿಬಿಟ್ಟಂತೆ ಭಾಸವಾಯಿತು. 'ಇನ್ನು ನೋಡಿ. ನನ್ನ ಗಂಡನ್ನ ಸಂತೋಷಪಡಿಸುವುದೇ ನನ್ನ ಕೆಲಸ. ಅವರ ಸುಖವೇ ನನ್ನ ಸುಖ!' ಎಂದು ಹೊಸಬಗೆಯ ಗಂಭೀರ ಸ್ವರದಲ್ಲಿ ಹೇಳಿದಳು. 'ನಿನ್ನ ಕಂಠಸ್ವರ ಹೀಗೇಕಾಯಿತಮ್ಮಾ?' ಅಂತ ನಾನು ಕೇಳಿದ್ದಕ್ಕೆ 'ಕಂಠಸ್ವರ ಮಾತ್ರ ಅಂದುಕೊಂಡ್ರಾ? ಪೂರ್ತಿ ನಾನು ಬೇರೆ ಸಾವಿತ್ರಿಯೇ!' ಎಂದಳು. ಆದನ್ನೆಲ್ಲ ನೋಡಿ ಇವಳಿಗೆ ಯಾವುದೋ ಗಾಳಿಚೇಷ್ಟೆ ಬಡೆದಿರಬೇಕು ಎಂದುಕೊಂಡೆವು. ಅವಳಿಗೆ ಗೊತ್ತಾಗದ ಹಾಗೆ ಏನೋ ಭಸ್ಮಗಳನ್ನೂ, ರಕ್ಷೆಗಳನ್ನೂ ಮಾಡಿಸಿದೆವು. ಹಾಗಿರುವಾಗ ಇದ್ದಕ್ಕಿದ್ದ ಹಾಗೆ ಸಾವಿತ್ರಿ ಮಾಯವಾಗಿ ಹೋದಳು. ನಾವು ಗಾಬರಿಯಾಗಿ ಅಲ್ಲೀ ಇಲ್ಲೀ ಹುಡುಕುವಾಗ, ಊರ ಹೊರಗಿನ ನದಿಯ ಬದಿಯಲ್ಲಿ ಯಾರಿಗೋ ಸಾವಿತ್ರಿಯ ಬಟ್ಟೆಗಳು ಸಿಕ್ಕಿದುವು. ಸಾವಿತ್ರಿ ನದಿಗೆಬಿದ್ದು ಸತ್ತುಹೋದಳೆಂದು ಕೊಂಡು ನಾವೆಲ್ಲಾ ಅಳಲಿಕ್ಕೆ ಶುರುಮಾಡಿದೆವು. ಈ ದುರ್ವಾರ್ತೆಯನ್ನು ನಿನಗೆ ಹೇಗೆ ಹೇಳುವುದೆಂದು ಅನುಮಾನಿಸುತ್ತ ಇಷ್ಟು ದಿನ ಕಳೆದೆವು. ಕಡೆಗೆ ಇವತ್ತು ಹೇಳಿಬಿಡೋಣವೆಂತಲೇ ಬಂದೆನು."

"ಇದೆಲ್ಲಾ ನಿಜವೇ ಅಪ್ಪಾ?" ಎಂದು ಸಾವಿತ್ರಿ ಆಶ್ಚರ್ಯದಿಂದ ಕೇಳಿದಳು. ಅವಳ ಪ್ರಶ್ನೆಗೆ ಪೂಣಚ್ಚನೇ ಉತ್ತರ ಕೊಡತೊಡಗಿದ:

"ನಿಜವೇ. ಇಲ್ಲಿ ನನಗೂ ನಿನ್ನ ನಿಜಸಂಗತಿ ಗೊತ್ತಾಗಿಹೋಯಿತು. ನಿನ್ನ ರೂಪದಲ್ಲಿ ಬೇರೊಂದು ಶಕ್ತಿ ಕೆಲಸಮಾಡುವುದನ್ನು ನೋಡಿ ಆದರೆ ಸಂಗತಿ ತಿಳಿದುಕೊಳ್ಳುವ ಆಲೋಚನೆಯಲ್ಲಿ ನಾನು ಆ ವಿಷಯ ಹೇಳಬಲ್ಲವನನ್ನು ಹುಡುಕಿಕೊಂಡು ಹೋಗುವಾಗ, ನಿನ್ನ ಅಪ್ಪ ಈ ಕಡೆಗೆ ಬರುವುದನ್ನು ನೋಡಿದೆ. ಅವರು ಇಲ್ಲಿಗೆ ಬಂದು ನಿನ್ನನ್ನು ನೋಡಿದ ಕೂಡಲೇ ನಿನ್ನನ್ನು ಹಿಡಿದ ಗಾಳಿಚೇಷ್ಟೆಯ ಪಿಶಾಚಿ ಬಿಟ್ಟು ಓಡಿರಬೇಕು. ಆ ಪಿಶಾಚಿ ಗಂಡನನ್ನು ಸುಖಪಡಿಸುತ್ತೇನೆಂದು ನೀನು ಹೇಳಿದ ಮಾತು ಕೇಳಿ ನಿನ್ನನ್ನು ಹಿಡಿದುಕೊಂಡು ಬಂದಿರಬೇಕು. ನಿನ್ನ ಅಪ್ಪನಿಗೂ ಅಮ್ಮನಿಗೂ ನಿನಗೇನೋ ಹಿಡಿಯಿತೆಂದು ಗೊತ್ತಾದ್ದರಿಂದ ಅವರೊಂದಿಗೆ ಹೇಳದೆಯೇ ಇಲ್ಲಿಗೆ ಬಂದಿರುವಿ. ಅಂದರೆ ಅದೇ ನಿನ್ನನ್ನು ಇಲ್ಲಿಗೆ ನಡೆಸಿಕೊಂಡು ಬಂದಿದೆ. ನೀನು ಸತ್ತುಹೋದಂತೆ ಎಲ್ಲರೂ ನಂಬಲಿಕ್ಕಾಗಿ ನಿನ್ನ ಬಟ್ಟೆಗಳನ್ನು ನದಿಯ ಬದಿಯಲ್ಲಿ ಬಿಟ್ಟಿದೆ ಎಂತಲೂ ಗೊತ್ತಾಯಿತು." ಎಂದನು.

ಆಮೇಲೆ ಸಾವಿತ್ರಿ ತಾನು ಆ ಪಿಶಾಚಿಗಿಂತಲೂ ಚೆನ್ನಾಗಿಯೇ ಗಂಡನನ್ನು ಮೆಚ್ಚಿಸಲು ಪ್ರಯತ್ನಪಟ್ಟು ಬೇಗದಲ್ಲೇ ಗಂಡನಿಂದ ಮೆಚ್ಚಿಗೆ ಪಡೆದಳು.





# ಪದ್ಮಾವತಿ

ಒಂದಾನೊಂದು ಕಾಲದಲ್ಲಿ ಸಿಂಹಳ ದೇಶಕ್ಕೆ ರಾಜನಾದ ಬೃಹದ್ರಥನೆಂಬ ರಾಜನಿಗೆ ಪದ್ಮಾವತಿ ಎಂಬ ಮಗಳಿದ್ದಳು. ಅವಳು ಬುದ್ಧಿ ತಿಳಿದಂದಿನಿಂದಲೂ ಶಿವನನ್ನು ಆರಾಧಿಸಿಕೊಂಡು ಬರುತ್ತ ಮಹಾ ಶಿವ ಭಕ್ತಳಾಗಿಯೇ ಬೆಳೆದಳು.

ತನ್ನ ಮಹಾ ಭಕ್ತೆಯಾದ ಪದ್ಮಾವತಿಗೆ ಒಂದು ಸಾರಿ ಶಿವನು ಪ್ರತ್ಯಕ್ಷದರ್ಶನ ಕೊಟ್ಟು, "ನಿನಗೆ ವಿಷ್ಣುಮೂರ್ತಿಯ ಅಂಶದಿಂದ ಹುಟ್ಟಿದವನೇ ಗಂಡನಾಗುತ್ತಾನೆ, ಬೇರೆ ಯಾರಾದರೂ ನಿನ್ನನ್ನು ಮದುವೆಯಾಗುವ ಇಚ್ಛೆ ತೋರಿದರೆ ಅವರು ಕೂಡಲೇ ಹೆಣ್ಣಾಗಿ ಹೋಗುವರು. ನಿನಗೆ ಮದುವೆಯಾದ ಮೇಲೆಯೇ ಅವರು ಗಂಡಾಗುತ್ತಾರೆ" ಎಂದು ಹೇಳಿ ಮಾಯವಾದನು. ಈ ಅದ್ಭುತ ವಿಷಯವನ್ನು ಪದ್ಮಾವತಿ ಯಾರೊಂದಿಗೂ ಹೇಳದೆ, ತನ್ನ ಮನಸ್ಸಿನೊಳಗೇ ಹುದುಗಿಸಿಟ್ಟುಕೊಂಡಳು.

ಕಾಲಕ್ರಮದಲ್ಲಿ ಪದ್ಮಾವತಿ ಯುಕ್ತವಯಸ್ಸಿಗೆ ಬಂದಳು. ಅವಳ ತಂದೆ ಅವಳಿಗೆ ಸ್ವಯಂವರದ ಏರ್ಪಾಡು ಮಾಡಿ ಡಂಗುರದ ಮೂಲಕ ಎಲ್ಲರಿಗೂ ಆಹ್ವಾನ ಮಾಡಿಸಿದನು. ಅನೇಕ ದೇಶಗಳ ರಾಜರು ಪದ್ಮಾವತಿಯನ್ನು ಮದುವೆಯಾಗುವ ಇಚ್ಛೆಯಿಂದ ಸ್ವಯಂವರಕ್ಕೆ ಬಂದು ಸೇರಿದರು. ಆದರೆ ಪದ್ಮಾವತಿ ಅವರ ಮುಂದೆ ಬಂದದ್ದೇ ತಡ, ಅವರೆಲ್ಲ ಸ್ತ್ರೀಯರಾಗಿ ಬದಲಾಯಿಸಿಬಿಟ್ಟರು.

ಶಿವನು ಅವಳಿಗೆ ಹೇಳಿದ ಮಾತು ಅರ್ಧದಷ್ಟು ನಿಜವಾಯಿತು, ಉಳಿದರ್ಧವು ನಿಜವಾಗಲಿಲ್ಲ. ಅದು ಹೇಗೆ ನಿಜವಾದೀತು ? ಅವಳನ್ನು ಮದುವೆಯಾಗುವ ಇಚ್ಛೆಯಿಲ್ಲದವನು ಸ್ವಯಂವರಕ್ಕೆ ಬಂದವರ ಗುಂಪಿನಲ್ಲಿ ಇಲ್ಲ. ಅವನಾರೆಂದು ತಿಳಿಯದೆ ಅವಳಾಗಿ ಹೇಗೆ ಮಾಲೆ ಹಾಕಬಲ್ಲಳು ?

ಬೃಹದ್ರಥರಾಜನು ಮತ್ತೆರಡು ಬಾರಿ ಕೂಡಾ ಸ್ವಯಂವರವನ್ನು ಏರ್ಪಡಿಸಿದನು. ಆಗಲೂ ಅಲ್ಲಿಗೆ ಬಂದ ರಾಜರು ಅವಳನ್ನು ನೋಡಿದ ಕೂಡಲೇ ಹೆಣ್ಣಾಗಿ ಮಾರ್ಪಟ್ಟರು. ಇನ್ನು ತನಗೆ ಮದುವೆಯೇ ಆಗಲಾರದೆಂದು ಪದ್ಮಾವತಿಗೆ ಮನೋವ್ಯಾಧಿ ಹಿಡಿಯಿತು. ಅವಳು ಒಂದು ದಿನ ಉದ್ಯಾನದಲ್ಲಿ ಚಿಂತಿಸುತ್ತಾ ಕುಳಿತ್ತಿದ್ದಾಗ, ಎಲ್ಲಿಂದಲೋ ಒಂದು ಗಿಳಿ ಅವಳ ಹತ್ತಿರ ಹಾರಿ ಬಂದು ಮಾನವ ಭಾಷೆಯಲ್ಲಿ, "ಅಮ್ಮಾ, ಏಕೆ ದುಃಖಿಸುವಿ ? ನಿನಗೆ

ಕೆ. ಮಾಧವರಾವ್

ಗಂಡನಾಗಿ ಬರುವವನೊಬ್ಬ ಮನ್ಮಥಾಕಾರನು ಇದ್ದಾನೆ. ಅವನನ್ನು ನಿನ್ನ ಬಳಿಗೆ ಬರಿಸುತ್ತೇನೆ" ಎಂದಿತು. ಅದನ್ನು ಕೇಳಿ ಪದ್ಮಾವತಿಯ ಮನಸ್ಸಿನಲ್ಲಿ ಆಶೆ ಚಿಗುರಿತು. ಶಿವನು ತನ್ನೊಂದಿಗೆ ಹೇಳಿದ ಮಾತಿನ ಉಳಿದರ್ಧವು ನಿಜವಾಗಲಿದೆ ಎಂಬ ನಂಬುಗೆ ಅವಳಲ್ಲಿ ಉಂಟಾಯಿತು.

ಈ ಗಿಳಿಯ ಸಮಾಚಾರ ಈ ರೀತಿಯಾಗಿದೆ: ಶಂಬಳಪುರವೆಂಬಲ್ಲಿ ಸುಮತಿಯೂ ವಿಷ್ಣುಂಕುಶನೂ ದಂಪತಿಗಳಾಗಿದ್ದರು. ಅವರಿಗೆ ಕಲ್ಕಿ ಎಂಬೊಬ್ಬ ಮಗನಿದ್ದನು. ಅವನು ಪರಶುರಾಮನ ಹತ್ತಿರ ಸಕಲ ವಿದ್ಯೆಗಳನ್ನೂ ಕಲಿತಿದ್ದನು. ಪದ್ಮಾವತಿಯ ಹಾಗೆಯೇ ಅವನೂ ಶಿವಭಕ್ತನಾಗಿದ್ದನು.

ಅವನ ಭಕ್ತಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ, ಅವನಿಗೊಂದು ಖಡ್ಗವನ್ನೂ, ಒಂದು ಕುದುರೆಯನ್ನೂ, ಒಂದು ಗಿಳಿಯನ್ನೂ ಪ್ರಸಾದಿಸಿದ್ದನು. ಆ ಗಿಳಿಯೇ ಎಲ್ಲೆಲ್ಲೋ ಹಾರುತ್ತ ಸಿಂಹಳಕ್ಕೆ ಬಂದು ಪದ್ಮಾವತಿಯ ಸ್ವಯಂವರಗಳ ಆಭಾಸಗಳನ್ನು ತಿಳಿದುಕೊಂಡು, ಇನ್ನು ತನಗೆ ಮದುವೆಯಾಗದೆಂದು ಚಿಂತಿಸುವ ಪದ್ಮಾವತಿಗೆ ಸಮಾಧಾನ ಹೇಳಿತ್ತು. ಅನಂತರ ಅದು ಕಲ್ಕಿಯ ಬಳಿಗೆ ಹೋಗಿ, "ಸಿಂಹಳದ ರಾಜಕುಮಾರಿ ಪದ್ಮಾವತೀದೇವಿ ಸ್ತ್ರೀಯರೊಳಗೆ ರತ್ನದಂಥವಳು. ಆವಳಿಗಿಂತ ಸುಂದರಳೂ ಸುಗುಣವತಿಯೂ ಆದ ಪತ್ನಿ ನಿನಗೆ ದೊರೆಯಲಾರಳು" ಎಂದು ಹೇಳಿ ಅವನನ್ನು ನಂಬಿಸಿತು. ಗಿಳಿಯ ವರ್ಣನೆಗಳಿಂದ ಕಲ್ಕಿ ಪದ್ಮಾವತಿಯನ್ನು ನೋಡದೆಯೇ ಅವಳ ಸೌಂದರ್ಯವನ್ನು ಊಹಿಸುತ್ತ ಪ್ರತ್ಯಕ್ಷ ನೋಡಲು ಬಯಸಿದನು. ಅಂತೆಯೇ ಅವನು ಗಿಳಿಯೊಂದಿಗೆ ಸಿಂಹಳಕ್ಕೆ ಹೊರಟು, ಅಲ್ಲಿಯ ಉದ್ಯಾನವನದಲ್ಲಿ ಸ್ನಾನಕ್ಕೆ ಬಂದ ಪದ್ಮಾವತಿಯನ್ನು ನೋಡಿದನು.

ಈ ಮೊದಲೇ ಪದ್ಮಾವತಿ ಗಿಳಿಯ ಮೂಲಕವಾಗಿ ಅವನ ವಿಷಯ ತಿಳಿದು ಅವನ ಮೇಲೆ ಮನಸ್ಸಿಟ್ಟವಳಾದುದರಿಂದ, ಅವನು ಅವಳನ್ನು ನೋಡಿ ಹೆಣ್ಣಾಗಲಿಲ್ಲ. ಆದುದರಿಂದ ಇವನೇ ತನಗೆ ವಿಧಿ ನಿರ್ಣಯಿಸಿದ ಗಂಡನೆಂದು ಪದ್ಮಾವತಿ ನಿಶ್ಚಯಿಸಿಕೊಂಡು. ತಂದೆಯ ಬಳಿಗೆ ಹೋಗಿ ತಾನು ಕಂಡ ಕಲ್ಕಿಯನ್ನು ಮದುವೆಯಾಗುವೆನೆಂದು ಹೇಳಿದಳು.

ರಾಜನಿಗೆ ಆದ ಸಂತೋಷಕ್ಕೆ ಪಾರವಿಲ್ಲ. ಪದ್ಮಾವತೀ ಕಲ್ಕಿಯರ ಮದುವೆಯನ್ನು ಬಹಳ ಸಂಭ್ರಮದಿಂದ ನೆರವೇರಿಸಿದನು. ಆ ಶುಭಸಮಯದಲ್ಲಿ ಸ್ತ್ರೀಯರಾಗಿ ಮಾರ್ಪಟ್ಟ ರಾಜಕುಮಾರರೆಲ್ಲರೂ ಶಿವವಾಕ್ಯದಂತೆ ತಮ್ಮ ತಮ್ಮ ಯಥಾರೂಪವನ್ನು ತಾಳಿದರು. ಅವರೆಲ್ಲಾ ಪದ್ಮಾವತೀ ಕಲ್ಕಿಯರನ್ನು ತುಂಬಾ ಸ್ತುತಿಸಿ ಸಂತೋಷದಿಂದ ತಮ್ಮ ತಮ್ಮ ರಾಜ್ಯಗಳಿಗೆ ಹೊರಟುಹೋದರು.





# ದೇವೀಭಾಗವತ

ಹೈಹಯ ವಂಶದಲ್ಲಿ ಹುಟ್ಟಿದವರಲ್ಲಿ ಕಾರ್ತವೀರ್ಯ ಮಹಾರಾಜನು ತುಂಬಾ ಪ್ರಖ್ಯಾತನಾದವನು. ಅವನ ಶೌರ್ಯ ಪರಾಕ್ರಮಗಳಿಗೆ ಸಾಟಿಯಿರಲಿಲ್ಲ. ಅವನಿಗೆ ಸಾವಿರ ಕೈಗಳಿದ್ದುವು. ಅವನು ಮಾಡಿದ ಯಜ್ಞ ಯಾಗಗಳಿಗೆ ಲೆಕ್ಕವಿರಲಿಲ್ಲ. ಕೈಗಳಿಗೆ ಎಲುವೇ ಇಲ್ಲದವನಂತೆ ದಾನಗಳನ್ನೂ ದಕ್ಷಿಣೆಗಳನ್ನೂ ಕೊಡುತ್ತಿದ್ದನು. ದತ್ತಾತ್ರೇಯನ ಶಿಷ್ಯನಾಗಿ ವಿದ್ಯೆಗಳನ್ನು ಕಲಿತವನು. ಅವನ ಪುರೋಹಿತರಾಗಿರುವವರು ಭೃಗುಗಳು. ಆದುದರಿಂದ ಕಾರ್ತವೀರ್ಯನ ಯಜ್ಞ ಯಾಗಗಳಲ್ಲಿ ತುಂಬಾ ದಕ್ಷಿಣೆಗಳನ್ನು ತೆಗೆದುಕೊಳ್ಳುತ್ತಿದ್ದ ಭೃಗುಗಳು ಅಪಾರ ಧನವಂತರಾದರು.

ಕಾರ್ತವೀರ್ಯನು ಸತ್ತು ಹೋದ ಮೇಲೆ ಆತನ ಸಂತತಿಯವರಾದ ಹೈಹಯರು ದಟ್ಟದರಿದ್ರರಾಗಿ ಹೋದರು. ಅವರು ತಮ್ಮ ಪುರೋಹಿತರಾದ ಭೃಗುಗಳನ್ನೇ ಯಾಚಿಸಲು ಕೈ ನೀಡ ಬೇಕಾಯಿತು. ಹೈಹಯರಿಗೆ ತಮ್ಮ ಧನವನ್ನು ಕೊಡಲು ಭೃಗುಗಳಿಗೆ ಇಷ್ಟವಿಲ್ಲದೆ ಧನವನ್ನೆಲ್ಲ ಅಲ್ಲಿ ಇಲ್ಲಿ ಹುಗಿದಿಟ್ಟು, ಹೈಹಯರಾಜರ ಭಯದಿಂದ ಬೆಟ್ಟದ ಗುಹೆಗಳ ಕಡೆಗೆ ಓಡಿ ಹೋಗಿ ಅಡಗಿಕೊಂಡರು.

ಹೈಹಯರು ಬಂದು ಹುಡುಕುವಾಗ ಭೃಗು ಬ್ರಾಹ್ಮಣರ ಮನೆಗಳೆಲ್ಲಾ ಖಾಲಿ! ಅವರು ಮನೆಗಳನ್ನು ಅಗೆದು ನೋಡಲು, ಹುಗಿದಿಟ್ಟ ಧನವು ಹೊರ ಬಿದ್ದಿತು. ಅದನ್ನು ನೋಡಿ ಹೈಹಯರಿಗೆ ಭೃಗುಗಳ ಮೇಲೆ ಕೆಟ್ಟ ಕೋಪವು ಬಂದಿತು. ಬೆಟ್ಟದ ಗುಹೆಗಳಲ್ಲಿ ಅಡಗಿದವರನ್ನೆಲ್ಲಾ ಹುಡುಕಿ ಹಿಡಿದು ಕೊಂದರು. ಗರ್ಭಿಣಿಯರಾಗಿದ್ದವರನ್ನೂ ತಿವಿದು ಗರ್ಭ ನಾಶಮಾಡಿದರು.

ಇಂತಹ ದಾರುಣವಾದ ಹಿಂಸಾಕಾಂಡವನ್ನು ನೋಡಲಾಗದೆ, ಆ ಪ್ರಾಂತದಲ್ಲಿದ್ದ ಇತರ ಮುನಿಗಳು ಹೈಹಯರನ್ನು ನೋಡಿ, "ಇಷ್ಟೊಂದು ದುಷ್ಟತನವು ಒಳ್ಳೆಯದಲ್ಲ. ಬ್ರಾಹ್ಮಣ ಜಾತಿಯನ್ನೇ ಹೀಗೆ ನಿರ್ಮೂಲ ಮಾಡಬಹುದೇ ? ಹೆಂಗುಸರ ಗರ್ಭವನ್ನುಕೂಡ ಭೇದಿಸುವುದೆಂದರೇನಿದು ? ರಾಜರು ಮಾಡುವಂಥ ಕೆಲಸವೇ ? ಇಂತಹ ಘೋರ ಪಾಪ

೨೦. ಲಕ್ಷ್ಮೀದೇವಿಗೆ ಶಾಪ



ರಾಜರಿಗೋ ಕಳ್ಳರಿಗೋ ಹೋಗುತ್ತದೆ, ತಪ್ಪಿದರೆ ಬೆಂಕಿಯ ಪಾಲಾಗುತ್ತದೆ. ಹಾಗೇನೂ ಆಗದಂತೆ ಅಡಗಿಸಿಟ್ಟವನು ತಾನೂ ಅನುಭವಿಸದೆ, ಇತರಿಗೂ ಕೊಡದೆ ಲೋಭಿಯೆನಿಸುತ್ತಾನೆ. ಅಂಥವನಿಗೆ ನರಕವೇ ಗತಿ. ನಾವು ನಮ್ಮ ಪುರೋಹಿತರ ಹತ್ತಿರ ಸಾಲ ಕೇಳಿದೆವು. ನಮ್ಮ ಒಳಿತಿಗಾಗಿ ಕೇಳಿದುದಕ್ಕೆ ಇಲ್ಲವೆಂದರು. ನಾವು ಒಳ್ಳೆಯ ಸ್ಥಿತಿಗೆ ಬಂದರೆ ಅವರಿಗೆ ತಾನೇ ಲಾಭ ? ಅವರಿಗೆ ಅಂತಹ ಜ್ಞಾನವೇ ಇಲ್ಲದೆ ಹೋಯಿತು. ಇಂತಹ ನೀಚರನ್ನು ದಂಡಿಸ ಬೇಕಾದುದು ರಾಜಧರ್ಮವಲ್ಲವೇ ? ಆದುದರಿಂದ ನಾವು ಮಾಡುವ ಈ ಕೆಲಸವನ್ನು ನೋಡಿ ನೀವು ಕ್ಷಮಿಸಬೇಕು." ಎಂದು ಆ ಮುನಿಗಳನ್ನು ಸಹಾ ತಮ್ಮ ಅಭಿಪ್ರಾಯಕ್ಕೆ ಒಪ್ಪಿಸಿ, ತಮ್ಮ ಭೃಗು ವಂಶ ಸಂಹಾರ ಕಾರ್ಯವನ್ನು ಮುಂದುವರಿಸಿದರು.

ಗಳಿಗೆ ತಕ್ಕ ಪ್ರತಿಫಲವು ಇಲ್ಲದೆ ಹೋಗುವುದೆಂದು ಕೊಂಡಿರಾ ? " ಎಂದು ಹೀಯಾಳಿಸಿದರು.

ಆ ಮುನಿಗಳ ಮಾತು ಕೇಳಿ ಹೈಹಯರು, "ನೀವು ಹೇಳುವುದು ನಿಮ್ಮ ಮಟ್ಟಿಗೆ ನಿಜ. ಏಕೆಂದರೆ ನೀವೆಲ್ಲಾ ಮಹಾತ್ಮರು. ಆದರೆ ಈ ಭೃಗು ಬ್ರಾಹ್ಮಣರು ನಮ್ಮ ಪೂರ್ವಿಕರಿಂದ ಅಪಾರ ಧನ ವನ್ನು ಪಡೆದುಕೊಂಡು, ನಮಗೆ ಸಿಕ್ಕಬಾರದೆಂಬ ದುರದ್ದೇಶದಿಂದ ಅಡಗಿಸಿಟ್ಟ ಕಳ್ಳರು. ಕಳ್ಳರನ್ನು ಕೊಲ್ಲುವುದು ಪಾಪವೇನಲ್ಲ. ಇವರು ಸಾಲವಾಗಿ ಕೂಡಾ ಹಣ ಕೊಡುವವರಲ್ಲದ ಪಾಪಿಗಳು. ಕಾರ್ತವೀರ್ಯ ಮಹಾರಾಜರು ಇವರಿಗೆ ದಾನ ದಕ್ಷಿಣೆ ಕೊಟ್ಟದ್ದು ಹುಗಿದಿಡಲಿಕ್ಕಾಗಿಯೇನು ? ಇಂಥವರನ್ನು ನೀವಾದರೂ ಮೆಚ್ಚುವಿರಾ? ಹೇಳಿರಿ. ಯಜ್ಞ ಮಾಡಿ ಸಂಪಾದಿಸುವ ಹಣವನ್ನು ಬ್ರಾಹ್ಮಣನು ತಾನು ಅನುಭವಿಸಬೇಕು. ದರಿದ್ರರಿಗೆ ದಾನ ಮಾಡಬೇಕು. ಹಾಗಿಲ್ಲದೆ ಹೋದರೆ ಧನವು

ಇದನ್ನು ನೋಡಿ ಉಳಿದ ಸ್ತ್ರೀಯರೆಲ್ಲಾ ಹೆದರಿ ಹಿಮಾಲಯ ಪರ್ವತದ ಮೇಲೆ ಓಡಿ ಹೋದರು. ಧನಲೋಭಕ್ಕೆ ವಶರಾದ ಭೃಗು ಬ್ರಾಹ್ಮಣರು ಸತ್ತರು. ಧನಲೋಭವು ಅಂಟಿತೆಂದರೆ ಅದು ಎಂತಹ ಕಾರ್ಯವನ್ನಾದರೂ ಮಾಡಿಸುತ್ತದೆ. ಅದನ್ನು ಮೀರಿಸುವ ಶತ್ರುವೇ ಮಾನವರಿಗಿಲ್ಲ.

ಹೆದರಿ ಹಿಮಾಲಯಕ್ಕೆ ಓಡಿ ಹೋದ ಭೃಗು ಸ್ತ್ರೀಯರು ಮಣ್ಣಿನಿಂದ ಗೌರೀದೇವಿಯ ವಿಗ್ರಹ ವನ್ನು ಮಾಡಿ, ನದಿಯ ತೀರದಲ್ಲಿ ಪ್ರತಿಷ್ಠಿಸಿ, ಅದನ್ನು ಪೂಜಿಸುತ್ತಾ ಮರಣವನ್ನು ಕಾಯುತ್ತಿದ್ದರು.

ಹೀಗಿರುವಾಗ ಒಂದು ದಿನ ರಾತ್ರಿ ಮಹಾದೇವಿ ಸುಂದರವಾದ ರೂಪದಲ್ಲಿ ಅವರ ಕನಸಿನಲ್ಲಿ ಕಂಡು ಬಂದು, "ನಿಮ್ಮ ಪೂಜಾ ವಿಧಿಗಳಿಗೆ ಮೆಚ್ಚಿದೆನು. ನಿಮ್ಮಲ್ಲಿ ಒಬ್ಬಳಿಗೆ ತೊಡೆಯಿಂದ ಒಬ್ಬ ಮಗನು ಹುಟ್ಟುತ್ತಾನೆ. ಅವನು ನನ್ನ ಅಂಶದಿಂದಲೇ ಹುಟ್ಟು ವನು, ಅವನೇ ನಿಮ್ಮೆಲ್ಲರನ್ನೂ ಕಾಪಾಡುತ್ತಾನೆ." ಎಂದಳು. ನಿದ್ದೆಯಿಂದ ಎದ್ದು ಆ ಸ್ತ್ರೀಯರು ಕನಸನ್ನು

ನೆನೆದು ತುಂಬಾ ಸಂತೋಷಪಟ್ಟರು. ಅವರಲ್ಲಿ ಒಬ್ಬಳ ತೊಡೆಯಲ್ಲಿ ಗರ್ಭ ಲಕ್ಷಣ ತೋರಿತು. ಕ್ರಮೇಣ ಅವಳ ತೊಡೆಯಿಂದ ಪುತ್ರನೊಬ್ಬನು ಹೊರಬಿದ್ದನು, ಅವನ ತೇಜಸ್ಸು ಸೂರ್ಯ ಬಿಂಬದಂತಿದ್ದಿತು. ಆ ಸ್ತ್ರೀಯರನ್ನು ಹುಡುಕುತ್ತಾ ಅಲ್ಲಿಗೂ ಬಂದ ಹೈಹಯ ವೀರರು, ಆ ಹುಡುಗನನ್ನು ನೋಡಿದ ಮರುಕ್ಷಣದಲ್ಲಿ ಕುರುಡರಾಗಿ ಬಿಟ್ಟರು!

ಇದೆಲ್ಲವೂ ಬ್ರಾಹ್ಮಣರ ಪ್ರಭಾವವಾಗಿರಬೇಕೆಂದು ಹೈಹಯರಿಗೆ ಭಯವಾಯಿತು. ಅವರೆಲ್ಲರೂ ಆ ಹುಡುಗನ ತಾಯಿಗೇ ಶರಣಾಗತರಾಗಿ ಬೇಡುತ್ತ, "ಅಮ್ಮಾ, ನಿನ್ನನ್ನು ನೋಡಿದ ಕೂಡಲೇ ನಾವೆಲ್ಲಾ ಕುರುಡರಾದೆವು. ಅದೇನು ನಿನ್ನ ಮಹಿಮೆಯೋ ನಾವರಿಯೆವು! ನಮ್ಮ ಮೇಲೆ ಅನುಗ್ರಹ ತೋರಿ, ನಮಗೆ ಮತ್ತೆ ಕಣ್ಣು ಬರುವ ಹಾಗೆ ಮಾಡಮ್ಮಾ! ಕುರುಡರಾಗಿ ಬದುಕುವುದಕ್ಕಿಂತಲೂ ಸಾವೇ ಮೇಲು! ಇನ್ನೆಂದಿಗೂ ನಾವು ಇಂಥ ಕೆಟ್ಟ ಕೆಲಸ ಮಾಡ ಲಾರೆವು. ಭೃಗುವಂಶದವರಿಗೆ ವಿಧೇಯರಾಗಿರುತ್ತೇವೆ. ಗೌರವಿಸುತ್ತೇವೆ. ಬುದ್ಧಿ ಕೆಟ್ಟು ನಾವು ಮಾಡಿದ ದುಷ್ಟ ಕಾರ್ಯಗಳನ್ನು ಕ್ಷಮಿಸಿ ನಮಗೆ ನೇತ್ರ ದಾನ ನೀಡು ತಾಯೇ!" ಎಂದು ಹೇಳಿಕೊಂಡರು.

ಅವರು ದೀನರಾಗಿ ಹಾಗೆಲ್ಲಾ ಹೇಳಿದುದನ್ನು ಕೇಳಿ ಆ ಬ್ರಾಹ್ಮಣ ಸ್ತ್ರೀ ಆಶ್ಚರ್ಯ ಪಡುತ್ತ, "ನಿಮ್ಮ ಕಣ್ಣುಗಳು ಹಾಗೇಕಾಯಿತೆಂಬ ಸಂಗತಿ ಯಾವುದೂ ನಮಗೆ ಗೊತ್ತಿಲ್ಲವಲ್ಲಾ? ನನಗೆ ನಿಮ್ಮ ಮೇಲೆ ಯಾವ ಬಗೆಯ ಕೋಪವೂ ಇಲ್ಲ. ನೀವು ಯಾರೆಂಬುದೂ ನಾನು ಅರಿಯೆನು. ಈಗ ನಿಮ್ಮ ಮಾತುಗಳಿಂದಷ್ಟೇ ನಿಮ್ಮನ್ನು ತಿಳಿದೆನು. ನಿಮ್ಮ ಕಣ್ಣುಗಳನ್ನು ತೆಗೆದವನು ನನ್ನ ಮಗನೇ ಆಗಿರಬೇಕು. ಏಕೆಂದರೆ ನೀವೇ ಹೇಳಿದಂತೆ ನೀವು ತುಂಬಾ ಕೆಟ್ಟವರು, ಕ್ರೂರರು. ಹಣಕ್ಕಾಗಿ ಘೋರವಾದ ಹತ್ಯಾಕಾಂಡ ಮಾಡಿದಿರಿ. ಆ ಪಾಪವು ಸುಮ್ಮನೆ ಹೋದೀತೇ? ಗರ್ಭದಲ್ಲಿರುವ ಪಿಂಡಗಳನ್ನೂ, ಶಿಶುಗಳನ್ನೂ, ವೃದ್ಧರನ್ನೂ ಆಲೋಚನೆಯಿಲ್ಲದೆ ಕೊಂದಿರಲ್ಲಾ? ನಿಮ್ಮ ಮದ ಅಡಗಿಸಲಿಕ್ಕೇ ಜಗದಂಬೆಯ ದಯೆ





ಯಿಂದ ಇವನು ನನ್ನ ತೊಡೆಯಿಂದ ಹುಟ್ಟಿದ್ದಾನೆ. ತನ್ನ ತಂದೆಗಳೆಲ್ಲಾ ಸತ್ತು ಹೋದುದಕ್ಕೆ ಇವನು ತುಂಬಾ ಕೋಪದಲ್ಲಿದ್ದಾನೆ. ಇವನ ಹತ್ತಿರ ಕ್ಷಮೆ ಬೇಡಿ ಶಾಂತನಾಗುವಂತೆ ಮಾಡಿರಿ. ನಿಮಗೆ ಕಣ್ಣು ಬರುತ್ತದೆ." ಎಂದಳು.

ತೊಡೆ ಅಂದರೆ ಊರುವಿನಿಂದ ಹುಟ್ಟಿದ ಆ ಮಗನಿಗೆ ಔರ್ವನೆಂದು ಹೆಸರಾಗಿತ್ತು. ಹೈಹಯರು ಬಾಲ ಔರ್ವನನ್ನು ಬಗೆ ಬಗೆಯಾಗಿ ಪ್ರಾರ್ಥಿಸಿ ಕೊಂಡರು, ಅದರಿಂದ ಔರ್ವನು ಶಾಂತನಾಗಿ ಅವರನ್ನು ಕುರಿತು ಹೀಗೆಂದನು :

"ಮಹಾದೇವಿ ಮಾಡಿಕೊಂಡ ನಿರ್ಣಯಗಳು ತಪ್ಪಲು ಸಾಧ್ಯವಿಲ್ಲ, ಅವಳ ಇಚ್ಛಾನುಸಾರವಾಗಿ ನಡೆದುವುಗಳಿಗಾಗಿ ಜ್ಞಾನಿಯಾದವನು ಚಿಂತಿಸ ಲಾರನು. ಕೋಪಿಸಲಾರನು. ಇನ್ನು ಮೇಲೆ ಯಾವ ಬ್ರಾಹ್ಮಣರಿಗೂ ಋಷಿಮುನಿಗಳಿಗೂ ಮನಃಶಾಂತಿ ಕೆಡದಂತೆ ನೋಡಿಕೊಳ್ಳಿ. ಹೋಗಿ ಬನ್ನಿ"

ಆ ಕೂಡಲೇ ಹೈಹಯರಿಗೆ ದೃಷ್ಟಿ ಬಂದಿತು. ಸಂತೋಷದಿಂದ ಹೊರಟು ಹೋದರು. ಔರ್ವನನ್ನು ಅವನ ತಾಯಿ ತುಂಬ ಪ್ರೇಮದಿಂದ ಒಳ್ಳೆಯ ರೀತಿಯಲ್ಲಿ ಬೆಳೆಸುತ್ತಾ ಬಂದಳು.

ಹೈಹಯ ವಂಶದಂತೆಯೇ ಭರತವಂಶವೂ ಪ್ರಸಿದ್ಧ ವಾದುದು. ಭರತನೇ ಅದರ ಮೂಲ ಪುರುಷ. ಯಾದವವಂಶವೆಂಬ ಇನ್ನೊಂದು ಪ್ರಸಿದ್ಧ ವಂಶಕ್ಕೆ ಯದು ಎಂಬವನು ಮೂಲ ಪುರುಷ. ಹೈಹಯ ವಂಶವು ಹೇಗೆ ಏರ್ಪಟ್ಟಿತೆಂಬುದಕ್ಕೆ ಇನ್ನೊಂದು ಅದ್ಭುತ ಕಥೆಯಿದೆ.

ಪೂರ್ವದಲ್ಲಿ ಸೂರ್ಯನ ಮಗನಾದ ರೇವಂತ ನೆಂಬವನು, ಉಚ್ಚೈಃಶ್ರವವೆಂಬ ಕುದುರೆಯ ಮೇಲೇರಿಕೊಂಡು, ವಿಷ್ಣುವನ್ನು ನೋಡಬೇಕೆಂಬ ಆತುರದಲ್ಲಿ ವೈಕುಂಠಕ್ಕೆ ಹೋದನು. ಉಚ್ಚೈಃಶ್ರವವು ಸಮುದ್ರಮಥನ ಕಾಲದಲ್ಲಿ ಲಕ್ಷ್ಮಿಗಿಂತ ಮೊದಲು ಹುಟ್ಟಿದುದರಿಂದ ಲಕ್ಷ್ಮಿಗೆ ಅಣ್ಣನಾಗಬೇಕು. ವೈಕುಂಠ ದಲ್ಲಿ ವಿಷ್ಣುವಿನ ಪಕ್ಕದಲ್ಲಿದ್ದ ಲಕ್ಷ್ಮಿ ತನ್ನ ಅಣ್ಣಕುದುರೆ ಯನ್ನೂ, ಅದರ ಮೇಲೆ ಆರೋಹಿಸಿರುವ ಸುಂದರ ಪುರುಷನನ್ನೂ ನೋಡಿ ಸಮ್ಮೋಹಿತಳಾಗಿ ಒಂದೇ ಸಮನೆ ನೋಡ ತೊಡಗಿದಳು.

ಅದನ್ನು ನೋಡಿ ವಿಷ್ಣು ಲಕ್ಷ್ಮಿಯೊಂದಿಗೆ, "ಈಗ ಬಂದವನು ಮೂರುಲೋಕಗಳಲ್ಲಿಯೂ ಎಣೆಯಿಲ್ಲ ದಿರುವಂಥ ಸುಂದರನು. ಇವನನ್ನು ನೀನು ಬಲ್ಲೆಯಾ ಲಕ್ಷ್ಮೀ ?" ಎಂದು ಕೇಳಿದನು.

ಆದರೆ ರೇವಂತನ ಅಂದಚೆಂದಗಳನ್ನು ನೋಡುತ್ತ ಮೈಮರೆತ ಲಕ್ಷ್ಮಿಗೆ ಗಂಡನ ಪ್ರಶ್ನೆ ಕೇಳಿಸಲೇ ಇಲ್ಲ. ವಿಷ್ಣು ಅವಳ ಸ್ಥಿತಿಯನ್ನು ನೋಡಿ ಕೋಪಾವೇಶ ದಿಂದ ಹೀಗೆಂದನು :

"ಹಾಗೇನು ನೋಡುವಿ ? ಇಲ್ಲಿಗೆ ಬಂದವರನ್ನು ನೋಡಿ ನಿನ್ನ ಮನಸ್ಸು ವಿಚಲಿತವಾಗಿ ಹೋಯಿತು. ನೀನು ರತಿಯೆಂದೂ, ರಮೆಯೆಂದೂ ಚಂಚಲ



ಸ್ವಭಾವದಿಂದ ಅಪಕೀರ್ತಿಯ ಪಾಲಾಗಿ ಹೋಗು! ಭೂಲೋಕದಲ್ಲಿ ಹೆಣ್ಣು ಕುದುರೆಯಾಗಿ ಹುಟ್ಟು!"

ವಿಷ್ಣುವಿನ ಬಾಯಿಯಿಂದ ಹೊರಟ ಶಾಪ ವಾಕ್ಯವನ್ನು ಕೇಳಿ, ಲಕ್ಷ್ಮಿ ಹೆದರಿ ಅಳುತ್ತ, ವಿಷ್ಣುವಿನ ಕಾಲಿಗೆ ಬಿದ್ದು, "ನನ್ನನ್ನು ನಿರ್ದಯನಾಗಿ ಹೀಗೆ ಶಪಿಸಬಹುದೆ? ಈ ಒಂದು ಅಲ್ಪಕಾರಣದಿಂದ ನನ್ನ ಮೇಲೆ ಸಹಜವಾಗಿ ನಿನಗಿದ್ದ ಪ್ರೇಮವು ಬತ್ತಿ ಹೋಯಿತೆ? ಎಂದಿಗೂ ಕೋಪವನ್ನರಿಯದ ಬೆಣ್ಣೆಯಂತೆ ಮೃದುವಾದ ನಿನ್ನ ಸ್ವಭಾವ ಥಕ್ಕನೆ ಹೀಗೆ ಮಾರ್ಪಡಬಹುದೆ? ನೀನು ನನ್ನನ್ನು ಬಿಟ್ಟೇ ಬಿಟ್ಟರೆ, ನಾನು ಈಗಲೇ ಪ್ರಾಣಬಿಡುತ್ತೇನೆ. ಬೇಡ. ದಯಮಾಡಿ ಶಾಪಕ್ಕೆ ವಿಮೋಚನೆ ಕೊಡು" ಎಂದಳು.

ಲಕ್ಷ್ಮಿಯ ದುಃಖ ನೋಡಿ ವಿಷ್ಣುವಿನ ಮನಸ್ಸು ಕರಗಿತು. ಅವನು ಲಕ್ಷ್ಮಿಯೊಂದಿಗೆ, ನಿನ್ನ ಗರ್ಭದಲ್ಲಿ ನನ್ನನ್ನು ಹೋಲುವಂತಹ ಮಗನು ಹುಟ್ಟಿದ ಕೂಡಲೇ ನಿನಗೆ ಶಾಪವಿಮೋಚನೆಯಾಗುತ್ತದೆ. ನೀನು ನನ್ನ ಬಳಿಗೇ ಹಿಂದಿರುಗಿ ಬರುವಿ" ಎಂದನು.

ವಿಷ್ಣು ಕೋಪದಲ್ಲಿರುವ ಸಂಗತಿ ರೇವಂತನಿಗೂ ಗೊತ್ತಾಯಿತು. ಕೂಡಲೇ ಅವನು ಕುದುರೆಯಿಂದಿಳಿದು ವಿಷ್ಣುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅಪ್ಪಣೆ ಪಡೆದುಕೊಂಡು ತನ್ನ ತಂದೆಯ ಬಳಿಗೆ ಹಿಂದಿರುಗಿ ನಡೆದ ಸಂಗತಿಯನ್ನು ಹೇಳಿದನು.

ಶಾಪಗ್ರಸ್ತಳಾದ ಲಕ್ಷ್ಮಿ ವಿಷ್ಣುವಿನಿಂದ ಅಪ್ಪಣೆ ಕೇಳಿಕೊಂಡು, ಸುವರ್ಣಾಕ್ಷವೆಂಬ ಸ್ಥಳಕ್ಕೆ ಹೋಗಿ, ಹೆಣ್ಣು ಕುದುರೆಯ ರೂಪತಾಳಿ ಶಿವನನ್ನು ಧ್ಯಾನಿಸುತ್ತ ತಪಸ್ಸಿನಲ್ಲಿದ್ದಳು. ಅಶ್ವಲಕ್ಷ್ಮಿಯ ತಪಸ್ಸಿಗೆ ಮೆಚ್ಚಿ ಶಿವನು ಪಾರ್ವತೀ ಸಮೇತ ವೃಷಭವಾಹನದ ಮೇಲೆ, ಪ್ರಮಥ ಗಣಗಳೊಂದಿಗೆ ಲಕ್ಷ್ಮಿಯ ಮುಂದೆ ಬಂದು ಹೀಗೆ ಹೇಳಿದನು:

"ಅಮ್ಮಾ! ಮಹಾಲಕ್ಷ್ಮೀ! ನೀನು ನನ್ನನ್ನು ಧ್ಯಾನಿಸಿ ಹೀಗೆ ತಪಸ್ಸುಮಾಡಲು ಕಾರಣವೇನು? ಏನು ಬೇಕಾದರೂ ಕೊಡುವಂತಹ ಸಮರ್ಥನು ವಿಷ್ಣು ತಾನೇ? ವಿವೇಕವಂತಳಾದವಳಿಗೆ ಗಂಡನಿಗಿಂತ ಹೆಚ್ಚಿನ ದೈವವಿರಲಾರದಷ್ಟೆ? ಅದರಲ್ಲಿಯೂ ನಿನ್ನ ಗಂಡ ಸಾಮಾನ್ಯದವನಲ್ಲವಷ್ಟೆ? ಹಾಗಿರುವಾಗ ನಾನು ನಿನಗೇನು ಸಹಾಯ ಮಾಡಬಲ್ಲೆನು?"

ಹೆಣ್ಣು ಕುದುರೆಯ ರೂಪದಲ್ಲಿರುವ ಲಕ್ಷ್ಮಿ ಶಿವನೊಂದಿಗೆ ಹೀಗೆಂದಳು:

"ನೀನು ಹೇಳಿದುದೆಲ್ಲವೂ ನಿಜವೇ ಆದರೂ ಆ ನನ್ನ ಗಂಡನೇ ನನ್ನನ್ನು ಶಪಿಸಿಬಿಟ್ಟನು. ಆ ಶಾಪವು ನಿನ್ನಿಂದ ಪರಿಹಾರವಾಗುವುದೆಂದು ನಂಬಿ ನಿನ್ನನ್ನು ಧ್ಯಾನ ಮಾಡುತ್ತಿದ್ದೇನೆ. ನನಗೆ ಮಗನು ಹುಟ್ಟಿಬಿಟ್ಟರೆ ಶಾಪವು ಹೋಗುತ್ತದೆ. ನನಗೆ ಮಗನು ಹುಟ್ಟುವ ಬಗೆ ಹೇಗೆ? ದಯಮಾಡಿ ನೀನೇ ಹೇಳು. ನನ್ನ ಗಂಡ ಎಲ್ಲಿಯೋ ವೈಕುಂಠದಲ್ಲಿ ಕುದುರೆಯಾಗುವಂತೆ ಶಪಿಸಿ ನನ್ನನ್ನು ಕಳುಹಿಸಿದ್ದಾನೆ. ನಾನೇನೋ ಭೂಮಿಯ ಈ ಅರಣ್ಯದಲ್ಲಿದ್ದೇನೆ. ನನಗೆ ಸಂತಾನವಾಗುವ



ಮಾರ್ಗ ಹೇಗೆ? ಎಲ್ಲಿದೆ? ನನ್ನ ತಪಸ್ಸಿಗೆ ನೀನು ನಿಜಕ್ಕೂ ತೃಪ್ತನಾಗಿದ್ದರೆ ನನ್ನ ಶಾಪ ತೀರಿಹೋಗುವಂತೆ ಮಾಡು. ನಿನಗೂ ನನ್ನ ಗಂಡನಿಗೂ ಭೇದವೇನಿಲ್ಲ. ನಿನ್ನನ್ನು ಮೆಚ್ಚಿಸಿದರೆ ನನ್ನ ಗಂಡನನ್ನು ಮೆಚ್ಚಿಸಿದ ಹಾಗೆಯೇ. ಆದುದರಿಂದ ನನ್ನ ಗಂಡನು ಹೇಗಾದರೂ ಇಲ್ಲಿಗೆ ಬಂದು ನನ್ನೊಂದಿಗಿರುವಂತೆ ನೀನೇ ಮಾಡಬೇಕು!"

ಆ ಮಾತಿಗೆ ಶಿವನು ತಲೆಯೊಲಿಯುತ್ತ, "ಅದುವೋ ಸಂಗತಿ? ಚಿಂತಿಸಬೇಡ. ನಿನ್ನ ಗಂಡ ಕುದುರೆಯ ರೂಪದಲ್ಲಿಯೇ ನಿನ್ನ ಬಳಿಗೆ ಬರುತ್ತಾನೆ. ಅವನು ಪ್ರಪಂಚವನ್ನೆಲ್ಲಾ ಆಳುವವನಲ್ಲವೆ? ಅವನಿಂದ ನಿನಗೆ ಹುಟ್ಟುವ ಮಗನೂ ಪ್ರಪಂಚವನ್ನು ಆಳುವವನಾಗುತ್ತಾನೆ. ಅವನಿಗೆ ಏಕವೀರನೆಂದು ಹೆಸರು ಬರುತ್ತದೆ. ಅವನಿಂದಲೇ ಹೈಹಯ ವಂಶವು ಪ್ರಾರಂಭವಾಗಿ ಭೂಮಿಯನ್ನಾಳುತ್ತದೆ. ಆಮೇಲೆ ನೀನೂ ನಿನ್ನ ಗಂಡನೂ ವೈಕುಂಠಕ್ಕೆ ಹೋಗಿ ಸುಖಸಂತೋಷವಾಗಿರುವಿರಿ. ನಿನಗೆ ಇಂತಹ ಕಷ್ಟಬರಲು ಕಾರಣವೇನಂದರೆ, ನೀನು ಪರಾಶಕ್ತಿಯನ್ನು ಆರಾಧಿಸಲಿಲ್ಲ. ಅವಳೇ ನಿನ್ನನ್ನು ಈ ಗತಿಗೆ ತಂದಳು. ಅವಳಿಂದಲೇ ನಿನಗೆ ಸಮ್ಮೋಹ ಕವಿಯಿತು" ಎಂದು ಹೇಳಿ ಶಿವನು ಹೊರಟುಹೋದನು.

ಶಿವನು ಕೈಲಾಸಕ್ಕೆ ಹೋದಕೂಡಲೇ, ಚಿತ್ರರೂಪನೆಂಬ ಪ್ರಮಥನನ್ನು ಕರೆದು, "ನೀನು ಈಗಲೇ ವೈಕುಂಠಕ್ಕೆ ಹೋಗಿ ವಿಷ್ಣುವಿನೊಂದಿಗೆ, ಅವನ ಹೆಂಡತಿಯ ಶೋಕನಿವಾರಣೆ ಮಾಡಬೇಕೆಂದು ನಾನು ಸ್ನೇಹದಿಂದ ಒತ್ತಾಯಿಸಿ ಹೇಳಿರುವುದಾಗಿ ಹೇಳು" ಎಂದು ಹೇಳಿ ಕಳುಹಿಸಿಕೊಟ್ಟನು.

ಚಿತ್ರರೂಪನು ವೈಕುಂಠಕ್ಕೆ ಹೋಗಿ ವಿಷ್ಣುಮಂದಿರದ ದ್ವಾರಪಾಲಕರಾದ ಜಯವಿಜಯರೊಂದಿಗೆ ತಾನು ಬಂದ ಸಮಾಚಾರವನ್ನು ವಿಷ್ಣುವಿಗೆ ಹೇಳಿ ಕಳುಹಿಸಿದನು. ಜಯನು ಒಳಗೆ ಹೋಗಿ ವಿಷ್ಣುವಿನೊಂದಿಗೆ, "ಶಿವನು ಚಿತ್ರರೂಪನೆಂಬ ಪ್ರಮಥನನ್ನು ಕಳುಹಿಸಿದ್ದಾನೆ. ಚಿತ್ರರೂಪನನ್ನು ಒಳಗೆ ಕಳುಹಿಸಬಹುದೇ?" ಎಂದು ಕೇಳಿದನು. ಕೂಡಲೇ ಕಳುಹಿಸುವಂತೆ ವಿಷ್ಣುವಿನ ಅನುಜ್ಞೆಯಾಯಿತು.

ಚಿತ್ರರೂಪನು ಒಳಗೆ ಹೋಗಿ ವಿಷ್ಣುವಿಗೆ ನಮಸ್ಕಾರಮಾಡಿ, ಕುಶಲ ಮಾತುಗಳಾದ ಮೇಲೆ, "ದೇವದೇವಾ! ತಮ್ಮೊಂದಿಗೆ ಒಂದು ಮುಖ್ಯ ವಿಷಯವನ್ನು ಹೇಳಲು ನಮ್ಮೊಡೆಯನು ನನ್ನನ್ನು ಕಳುಹಿಸಿದ್ದಾನೆ. ಆತನು ತನ್ನ ಮಾತಿನಲ್ಲಿ ತಮ್ಮೊಂದಿಗೆ ಹೀಗೆ ಹೇಳಲು ಹೇಳಿದ್ದಾನೆ. 'ಮಹಾವಿಷ್ಣೂ, ನಿನ್ನ ಹೆಂಡತಿಯಾದ ಲಕ್ಷ್ಮೀದೇವಿ ಕುದುರೆಯ ರೂಪದಲ್ಲಿ ಕಾಳಿಂದೀ ತಮಸಾ ನದಿಗಳ ಸಂಗಮದ ಹತ್ತಿರ ಧ್ಯಾನನಿಷ್ಠೆಯಲ್ಲಿ ಕ್ಷೇಮವಾಗಿದ್ದಾಳೆ. ಅವಳು ತಪಸ್ಸಿನಿಂದ ನನ್ನನ್ನು ಮೆಚ್ಚಿಸಿದ್ದಾಳೆ. ಲಕ್ಷ್ಮಿಯನ್ನು ಎಲ್ಲಾ ದೇವತೆಗಳೂ ಪೂಜಿಸುವರೆಂಬುದು ನೀನು ಬಲ್ಲೆ.

ಅವಳ ಅನುಗ್ರಹವನ್ನು ಕಳೆದುಕೊಂಡ ಮಾನವರಂತೂ ಬದುಕಿರಲು ಸಾಧ್ಯವಿಲ್ಲ. ಅಂತಹ ಪತ್ನಿಯನ್ನು ದೂರಮಾಡಿಕೊಂಡು, ಲೋಕಕ್ಕೆ ಕೇಡಾಗುವಂತೆ ಮಾಡುವುದು ನಿನಗೂ ಶಾಂತಿ ಕೆಡುವ ಕಾರ್ಯ ವೆನಿಸುತ್ತದೆ. ಸಾಮಾನ್ಯ ಮನುಷ್ಯನೂ ಸಹ ಹೆಂಡತಿ ಯನ್ನು ಬಿಟ್ಟಿರಲಾರ. ಹಾಗಿರುವಾಗ ನಿಷ್ಕಾರಣ ವಾಗಿ, ಅಲ್ಪಾವೇಶದಿಂದ ನೀನಾದರೂ ಪತ್ನಿಯನ್ನು ಬಿಟ್ಟು ಹೇಗೆ ಇರುವಿಯೋ! ನನ್ನ ಮಾತನ್ನು ಅಲಕ್ಷ್ಯ ಮಾಡದೆ ಕೂಡಲೇಹೋಗಿ ಲಕ್ಷ್ಮಿಯನ್ನು ಸಮಾಧಾನ ಪಡಿಸಿ ಮೊದಲಿನಂತಿರು. ದಕ್ಷಯಜ್ಞದಲ್ಲಿ ಹೆಂಡತಿ ಯನ್ನು ಕಳೆದುಕೊಂಡಾಗಲೇ, ಭಾರ್ಯಾವಿಯೋಗ ವೆಂದರೆ ಹೇಗಿರುತ್ತದೆಂದು ನನಗೆ ಗೊತ್ತಾಗಿದೆ. ಆದುದರಿಂದ ಯಾರಿಗೆ ಹೆಂಡತಿಯ ವಿಯೋಗ ವಾದರೂ ನನಗೆ ಕಷ್ಟವಾಗಿರುತ್ತದೆ. ನಿನಗಂತೂ ಹೆಂಡತಿ ದೂರಹೋಗಿ ಬಹಳ ಕಾಲವಾಯಿತು. ಆದರಿಂದ ನೀನು ಸುಖವಾಗಿರುವಿಯೆಂದು ನಾನು ನಂಬಲಾರೆ. ಕೂಡಲೇ ಕುದುರೆಯ ರೂಪದಲ್ಲೇ ನಿನ್ನ ಪತ್ನಿಯ ಬಳಿಗೆ ಹೋಗು" ಎಂದು ಹೇಳಿದನು.

ವಿಷ್ಣು ತಲೆದೂಗಿ ಶಿವನ ಮಾತನ್ನು ಸ್ವೀಕರಿಸಿ ಪ್ರಮಥನನ್ನು ಕಳುಹಿಸಿಕೊಟ್ಟು, ಕೂಡಲೇ ಕುದುರೆಯ ರೂಪದಲ್ಲಿ ಹೋಗಿ ಲಕ್ಷ್ಮಿಯೊಂದಿಗೆ ವಿಹರಿಸಿದನು. ಅಶ್ವಲಕ್ಷ್ಮಿ ಒಬ್ಬ ಮಗನನ್ನು ಹಡೆದಳು.

ಆ ಮೇಲೆ ವಿಷ್ಣು ಲಕ್ಷ್ಮಿಯೊಂದಿಗೆ "ಇನ್ನು ನಾವು ವೈಕುಂಠಕ್ಕೆ ಹೋಗೋಣ, ಈ ಮಗನು ಇಲ್ಲಿಯೇ ಇರಲಿ. ನೀನು ಕುದರೆಯ ರೂಪವನ್ನು ಬಿಟ್ಟುಬಿಡು" ಎಂದನು. "ಇದೇನು ಮಾತು? ಯಾವಸ್ತ್ರೀಯೇ ಆದರೂ ತನ್ನ ಶಿಶುವನ್ನು ಅರಣ್ಯದ ಪಾಲುಮಾಡಲು ಒಪ್ಪುವಳೇನು? ಈ ನದಿಯ ತೀರದಲ್ಲಿ ಮಗುವನ್ನು ಬಿಟ್ಟರೆ ಯಾರು ಕಾಪಾಡುತ್ತಾರೆ?" ಎಂದು ಲಕ್ಷ್ಮಿ ಹೇಳುತ್ತಿರುವಾಗಲೇ ಅವಳ ಶಾಪ ಹೋಗಿ ದಿವ್ಯ ಶರೀರಿಣಿಯಾದಳು. ವಿಷ್ಣುವೂ ನಿಜರೂಪ ತಾಳಿದನು. ಅವರಿಗಾಗಿ ವಿಮಾನವೂ ಬಂದಿತು.

ಲಕ್ಷ್ಮಿ ತನ್ನ ಮಗನನ್ನು ಎತ್ತಿಕೊಂಡು, "ಇವನು ಎಲ್ಲಾ ವಿಧದಲ್ಲಿಯೂ ನಿನ್ನ ಹಾಗೆಯೇ ಇದ್ದಾನೆ. ಇವನನ್ನು ಇಲ್ಲಿ ಬಿಡಲಾರೆ. ಮೂವರೂ ಹೋಗೋಣ" ಎಂದಳು.

"ಲಕ್ಷ್ಮೀ, ಇವನಿಂದ ಒಂದು ಕಾರ್ಯವಾಗಲಿದೆ. ಯಯಾತಿರಾಜನಿಗೆ ತುರ್ವಸು ಎಂಬ ಮಗನಿದ್ದಾನೆ. ಅವನು ಸಂತಾನಕ್ಕಾಗಿ ತಪಸ್ಸು ಮಾಡುತ್ತಿದ್ದಾನೆ. ಅವನೇ ಈ ಮಗುವನ್ನು ಬೆಳೆಸುವ ಹಾಗೆ ಮಾಡು ತ್ತೇನೆ. ಆ ತುರ್ವಸು ಇಲ್ಲಿಗೆ ಬರುವವರೆಗೂ ಈ ಶಿಶುವಿಗೆ ಯಾವ ಭಯವೂ ಇಲ್ಲ." ಎಂದು ವಿಷ್ಣು ಲಕ್ಷ್ಮಿಯನ್ನು ನಂಬಿಸಿ, ಅವಳೊಂದಿಗೆ ದೇವ ವಿಮಾನ ದಲ್ಲಿ ವೈಕುಂಠಕ್ಕೆ ಹೊರಟುಹೋದನು.



# ಜಗಳ

ಈಚೀ ಮನೆಯ ಸೀತಮ್ಮನೂ. ಆಚೀ ಮನೆಯ ಲಚ್ಚಮ್ಮನೂ ಮೊದ ಮೊದಲು ತುಂಬಾ ಸ್ನೇಹದಲ್ಲಿ ಹರಟೆ ಹೊಡೆದುಕೊಂಡಿದ್ದರು. ಕಡೆಗೊಮ್ಮೆ ಫಕ್ಕನೆ ಏನೋ ಮಾತಿಗೆ "ನಿನ್ನ ಬುದ್ಧಿ ಮಣ್ಣು ತಿಂದಿತು ಬಿಡು" ಎಂದು ಒಬ್ಬಳು ಇನ್ನೊಬ್ಬಳಿಗೆ ಹೇಳಲು, ಆ ಕ್ಷಣದಿಂದ ಇಬ್ಬರೂ ಬದ್ಧ ಶತ್ರುಗಳಾದರು. ಹರಟೆ ಹೋಗಿ ಅವರಿಬ್ಬರೊಳಗೆ ಯಾವಾಗಲೂ ಬಾಯಿ ಬಾಯಿ ಜಗಳವಾಗುತ್ತಿರಲು ಆ ಬೀದಿಯವರಿಗೆಲ್ಲ ವಿನೋದವೆನಿಸಿತು. ಆದರೆ ಅವರಿಬ್ಬರ ಗಂಡಂದಿರಿಗೆ ಅವಮಾನವೆನಿಸುತಿತ್ತು.

ಆ ಗಂಡಂದಿರಿಬ್ಬರೂ ಕೂಡಿ ತಮ್ಮ ಹೆಂಡಂದಿರನ್ನು ಸರಿಪಡಿಸಲು ಒಂದು ಉಪಾಯ ಆಲೋಚಿಸಿದರು. ಸೀತಮ್ಮನ ಗಂಡ ಒಂದು ನಾಯಿ ಮರಿಯನ್ನು ಸಾಕಲು ತಂದ. ಲಚ್ಚಮ್ಮನ ಗಂಡ ಒಂದು ಬೆಕ್ಕಿನ ಮರಿಯನ್ನು ತಂದುಕೊಂಡ. ನೆರೆ ಹೊರೆಯ ಆ ನಾಯಿ ಬೆಕ್ಕುಗಳು ಒಂದನ್ನೊಂದು ನೋಡಿದಾಗ, ಕೋಪದಿಂದ ನಾಯಿ ಬೊಗಳುವುದೂ, ಬೆಕ್ಕುಭುಸ್ಸೆಂದು ಸುಮಿದಾಡುವುದೂ ನಡೆಯಿತು. ಅದನ್ನು ನೋಡಿ ಹತ್ತು ಮಂದಿ ಆನಂದಿಸುವರು.

ಕ್ರಮವಾಗಿ ನೆರೆ ಹೊರೆಯ ಗಂಡುಸರು ಆ ಬೆಕ್ಕಿಗೂ ನಾಯಿಗೂ ಒಂದೇ ಬಟ್ಟಲಿನಲ್ಲಿ ಆಹಾರ ತಿನ್ನಲು ಕಲಿಸಿದರು. ಹಾಗಿರಲು ಅವು ಒಂದನ್ನೊಂದು ನೋಡಿ ಕೋಪಿಸುವುದನ್ನು ಬಿಟ್ಟು, ಪರಸ್ಪರ ಆಡಿಕೊಳ್ಳಲು ಶುರು ಮಾಡಿದುವು. ಅದನ್ನು ನೋಡಿ ಹತ್ತು ಮಂದಿ "ಮನುಷ್ಯರಿಗಿಂತ ಈ ಪ್ರಾಣಿಗಳೇ ಮೇಲು" ಎಂದು ಹೇಳುವುದನ್ನು ಕೇಳಿ, ಸೀತಮ್ಮಾ ಲಚ್ಚಮ್ಮಂದಿರು ಬಾಯಿ ಮುಚ್ಚಿ, ಜಗಳ ಬಿಟ್ಟು, ಮೆಲ್ಲನೆ "ಒಳ್ಳೇ ನಾಯಿ ನಿಮ್ದು", "ಒಳ್ಳೇ ಬೆಕ್ಕು ನಿಮ್ದು" ಎನ್ನುತ್ತ ನಗುತ್ತ ಕ್ರಮೇಣ ಮೊದಲಿನಂತೆಯೇ ಸ್ನೇಹಿತೆಯರಾದರು.





# ತಾಯಿ ಇಲ್ಲದ ಮಗ

ಒಂದು ಊರಿನಲ್ಲಿ ರಂಗನೆಂಬ ಹುಡುಗನಿದ್ದ. ತುಂಬಾ ತಂಟಲುಮಾರಿ ಹುಡುಗ. ತಾಯಿ ಹೇಳಿದ ಮಾತನ್ನು ಲಕ್ಷ್ಯವೇ ಮಾಡುತ್ತಿರಲಿಲ್ಲ. ಸಿಕ್ಕಿದಲ್ಲಿ ತಿರುಗಾಡುತ್ತ, ಪೀಡಿಸಿ ಕಾಡಿಸಿ ಹಣ ಕೇಳಿ ಕಂಡಾ ಬಟ್ಟೆ ಖರ್ಚು ಮಾಡುತ್ತ ಹೊಣೆಯಿಲ್ಲದಂತಿರುವುದನ್ನು ನೋಡಿ, ಅವನ ಭವಿಷ್ಯ ಏನಾಗುವುದೋ ಎಂದು ತಾಯಿ ಚಿಂತಿಸುತ್ತಾ ಇರುವಳು.

ಒಂದು ಸಾರಿ ರಂಗನು ಯಾವನೋ ಒಬ್ಬ ದೊಡ್ಡ ಮನುಷ್ಯನ ಹತ್ತಿರ ತಗಾದೆ ಮಾಡುತ್ತ ಮೊರಟಾಗಿ ಏನೋ ಹೇಳಿದನು. ಅವನು ರಂಗನನ್ನು ಒದೆಯಲು ಸಿದ್ಧನಾದಾಗ, ಸಮಯಕ್ಕೆ ಅವನ ತಾಯಿ ಅಲ್ಲಿಗೆ ಬಂದು, ಆ ದೊಡ್ಡ ಮನುಷ್ಯನ ಕಾಲಿಗೆ ಬಿದ್ದು ಬೇಡಿ ಕೊಂಡು ಮಗನನ್ನು ಕಾಪಾಡಿದಳು.

ಆಮೇಲೆ ಅವಳು ಅವನನ್ನು ನೋಡಿ, "ಯಾಕೋ ಹೀಗೆ ದೊಡ್ಡ ದೊಡ್ಡವರನ್ನು ಕೆಣಕುತ್ತೀ? ಇನ್ನೂ ಬುದ್ಧಿ ಬರಲಿಲ್ಲವಲ್ಲಾ ನಿನಗೆ?" ಎಂದು ಜರೆದಾಡಿದಳು.

ರಂಗನು ತನ್ನಿಂದ ಯಾವತಪ್ಪೂ ಇಲ್ಲವೆಂದೂ, ಆ ದೊಡ್ಡ ಮನುಷ್ಯನೇ ತನ್ನನ್ನು ನಾಯಿಯ ಹಾಗೆ ನೋಡಿದನೆಂದೂ, ತಾಯಿಗೆ ಹೇಳಿದನು.

"ಅದೆಲ್ಲಾ ಹಚ್ಚಿಕೋ ಬಾರದಪ್ಪ. ನಾವು ಹಣ ವಿಲ್ಲದ ಬಡವರು. ಧನವಂತರು ನಮ್ಮಂಥವರಿಗೆ ಏನು ಬೇಕಾದರೂ ಹೇಳಿ ಯಾರು. ಎಷ್ಟೇ ಅವಮಾನ ವೆನಿಸಿದರೂ ಸಹಿಸಿಕೊಂಡಿರಬೇಕಪ್ಪಾ," ಎಂದಳು ರಂಗನಿಗೆ ತಾಯಿ.

ಈ ಮಾತು ರಂಗನಿಗೆ ಒಪ್ಪಿಗೆಯಾಗಲಿಲ್ಲ. "ಸಹಿಸ ದಿದ್ದರೆ ಏನಾಗುತ್ತೆ?" ಎಂದು ತಿರುಗಿ ಕೇಳಿದ. "ನಮಗೆ ತಿನ್ನಲಿಕ್ಕೇ ಏನೂ ಇಲ್ಲದ ಹಾಗಾಗುತ್ತೆ. ಅದಕ್ಕಿಂತ ಮೇಲೇನಾಗಬೇಕು?" ಎಂದಳು ತಾಯಿ.

"ಅಂದರೆ ದೊಡ್ಡವರೊಂದಿಗೆ ಜಗಳಾಡಿದರೆ ನೀನು ಕೂಡಾ ನನಗೇನೂ ಕೊಡಲಾರೆಯಾ?" ಎಂದು ಕೇಳಿದ ರಂಗ. "ನಾನು ಕೊಡದೆ ಇರುತ್ತೇ ನೆಯೇ? ಹುಚ್ಚಾ, ನಾನು ಯಾವಾಗಲೂ ನಿನ್ನೊಂದಿಗೇ ಬದುಕಿರಲಾರೆನಪ್ಪ? ಅದಕ್ಕೇ ನನಗೆ ಸಂಕಟವಾಗುತ್ತೆ" ಎಂದು ತಾಯಿ ಕಣ್ಣೀರು ತುಂಬಿ ಕೊಂಡಳು. ರಂಗನ ಮನಸ್ಸಿನಲ್ಲಿ ವಿಚಾರ ಹರಿಯಿತು.

ತಾನು ಕೂಡಾ ದೊಡ್ಡ ಮನುಷ್ಯನಾಗಬೇಕೆಂದು ರಂಗನಿಗೆ ತೋರಿತು. ಅಂದಿನಿಂದ ಗುರುವಿನ ಬಳಿಗೆ ಹೋಗಿ ಮನಸ್ಸುಕೊಟ್ಟು ವಿದ್ಯಾಭ್ಯಾಸ ಮಾಡಲು

ಜಿ. ರಾಮಲಕ್ಷ್ಮಿ

ತೊಡಗಿದನು. ಆದರೂ ಕಠಿಣ ಮಾತು ಹೇಳಿದರೆ ಸಹಿಸಲು ಅವನಿಗಾಗುತ್ತಿರಲಿಲ್ಲ. ದುರದೃಷ್ಟವಶಾತ್ ರಂಗನ ವಿದ್ಯಾಭ್ಯಾಸ ಪೂರ್ತಿಯಾಗುವುದಕ್ಕೆ ಮೊದಲೇ ಅವನ ತಾಯಿ ತೀರಿಹೋದಳು.

ಒಂದು ದಿನ ರಂಗನೊಂದಿಗೆ ಅವನ ಗುರು, "ನಿನಗೆ ಓದುಬರೆಹಗಳು ಚೆನ್ನಾಗಿ ಹತ್ತಿಕೊಳ್ಳುತ್ತವೆ. ಹೇಗಾದರೂ ಇನ್ನೆರಡು ವರ್ಷ ಕಷ್ಟಪಟ್ಟು ಕಲಿತರೆ ವಿದ್ಯೆ ಪೂರ್ತಿಯಾಗುತ್ತದೆ. ದಿನಕ್ಕೊಂದು ಮನೆಯ ಹಾಗೆ ವಾರದ ಮನೆಗಳನ್ನು ಏರ್ಪಡಿಸಿಕೊಂಡಾದರೂ ವಿದ್ಯೆ ಕಲಿತು ಮುಗಿಸಪ್ಪ" ಎಂದರು.

ರಂಗನು ಗುರುಗಳ ಯೋಚನೆಯಂತೆ ವಾರದ ಹುಡುಗನಾಗಿ ಕಲಿಯತೊಡಗಿದನು. ಅವನು ವಾರದ ಊಟಮಾಡುವ ಮನೆಗಳಲ್ಲಿ ರಂಗನಿಗೆ ಅನೇಕ ಕೆಲಸಗಳನ್ನು ಕೂಡಾ ಹೇಳುತ್ತಿದ್ದರು. ಹೇಳಿದ ಕೆಲಸ ಎಷ್ಟು ಚೆನ್ನಾಗಿ ಮಾಡಿದರೂ ಏನೋ ಒಂದು ನೆವನ ಹಿಡಿದು ಬಯ್ಯುವರು. ಮರ್ಮಾಹತವಾಗುವಂತೆ ಹೇಳುವರು. ಮೊದಮೊದಲು ಕಷ್ಟವಾದರೂ ಕ್ರಮವಾಗಿ ಅಭ್ಯಾಸವಾಯಿತು. ಒಂದು ಮನೆಯಲ್ಲಿ ಗಿಡಗಳಿಗೆ ನೀರು ಹೊಯ್ಯಲು ಹೇಳಿದರು. ನೀರು ಹೊಯ್ಯುವಾಗ, "ಎಷ್ಟು ನೀರು ಹೊಯ್ದಿದ್ದೀಯೋ! ಗಿಡ ಕೊಳೆತು ಸಾಯುತ್ತೆ! ಯಾಕಾದೀ ನೀನು?" ಎಂದು ಬಯ್ಯುವರು. ನೀರು ಕಡಿಮೆ ಹೊಯ್ದರೆ, "ಇಷ್ಟು ಕಮ್ಮಿ ನೀರು ಹೊಯ್ದರೆ ಬಿಸಿಲಿಗೆ ಒಣಗಿ ಗಿಡ ಸಾಯುತ್ತೆ. ಏನೋ ನೀರು ಹೊಯ್ದ ಶಾಸ್ತ್ರ ಮಾಡ್ತೀಯೇನು? ಸೋಮಾರಿ!" ಎಂದು ಜರೆಯುವರು.

ಹೀಗೆ ಕೆಲವರು ರಂಗನು ಏನು ಮಾಡಿದರೂ ತಪ್ಪು ನೋಡಿ ಹೇಳುತ್ತಾರೆ. ಆದರೂ ರಂಗನು ಸಹಿಸಿಕೊಂಡು ಸುಮ್ಮನಿರುವನು. ಕ್ರಮವಾಗಿ ಅವನು ತನ್ನ ಈ ಸಹನೆಯಿಂದ ವಾರದ ಮನೆಯವರನ್ನು ಮಾತ್ರವಲ್ಲದೆ ಊರಿನವರನ್ನು ಕೂಡಾ ಮೆಚ್ಚಿಸಿಬಿಟ್ಟನು. ಎಲ್ಲರೂ ತಮ್ಮ ಮನೆಯ ಹುಡುಗರಿಗೆ ಬುದ್ಧಿ ಹೇಳುವಾಗ ಅವನನ್ನು ಉದಹರಿಸಿ ಹೇಳತೊಡಗಿದರು.



ಆ ಊರಿನಲ್ಲಿ ದಾಮು ಎಂಬ ಹುಡುಗನು ಒಬ್ಬ ಧನಿಕನ ಮಗ. ಅವನಿಗೂ ರಂಗನ ವಯಸ್ಸೇ. ದೊಡ್ಡವರು ಏನಾದರೂ ಬಯ್ದು ಹೇಳಿದರೆ ಕೇಳುವವನಲ್ಲ. ಇದಿರಿಸಿ ಮಾತಾಡುತ್ತಿದ್ದ.

ಒಂದು ದಿನ ದಾಮು ತನ್ನ ತಾಯಿಯೊಂದಿಗೆ ವಾದ ಮಾಡುತ್ತ ತಾಯಿಗೆ ಕಣ್ಣೀರು ಬರುವ ಹಾಗೆ ಮಾಡಿದ. ಅವನ ತಾಯಿ ಬೇಸತ್ತು "ಆ ರಂಗನನ್ನು ನೋಡಿ ಯಾದರೂ ಬುದ್ಧಿ ಕಲ್ತುಕೋ ಬಾರದೇನೋ? ಎಷ್ಟು ಕಷ್ಟಪಟ್ಟು ಓದಿಕೊಳ್ಳುತ್ತಿದ್ದಾನೆ ನೋಡು. ಕಲಿಯುವವನೆಂದು ಸ್ವಲ್ಪ ಕೂಡಾ ಗರ್ವ ಇಲ್ಲ ಅವನಿಗೆ. ಯಾರಿಗಾದರೂ ಒಂದು ಮಾತು ಇದಿರಾಡುತ್ತಾನೆಯೋ?" ಎಂದಳು.

ಇದು ಎಷ್ಟರಮಟ್ಟಿಗೆ ನಿಜವೋ ನೋಡಬೇಕೆಂದು ದಾಮುಗೆ ತೋರಿತು. ಅವನು ರಂಗನ ಪ್ರತಿಯೊಂದು ಚರ್ಯೆಯನ್ನೂ ಗಮನಿಸಿಕೊಡೇ ಬರತೊಡಗಿದನು.

ಒಂದು ಮನೆಯಲ್ಲಿ ಅಳುವ ಮಗುವನ್ನು ಎತ್ತಿಕೊಳ್ಳದೆ ರಂಗನು ಬೇರೇನೋ ಕೆಲಸಕ್ಕೆ ಹೋಗುವುದನ್ನು ನೋಡಿ, ಆ ಮಗುವಿನ ತಾಯಿ ರಂಗನನ್ನು ಬಯ್ದಳು. ಮತ್ತೊಂದು ಮನೆಯಲ್ಲಿ ಅಳುವ ಮಗುವನ್ನು ರಂಗನು ಎತ್ತಿಕೊಂಡಾಗ, "ಇವನೊಬ್ಬ ಮಗುವನ್ನು ಎತ್ತಿ ಎತ್ತಿ ಅಭ್ಯಾಸಮಾಡುತ್ತಾನೆ!" ಎಂದು ಬೈದರು. ಪ್ರತಿ ಮನೆಯಲ್ಲಿ ಅವನು ಯಾವುದೋ ಒಂದು ಕಾರಣದಿಂದ ಬೈಗುಳು ತಿನ್ನುತ್ತಿದ್ದನು. ಬೈಗಳನ್ನು ಸಹಿಸಿಕೊಂಡೇ ಇದ್ದನು.

ದಾಮು ರಂಗನನ್ನು ನೋಡಿ, "ನಿನ್ನ ಸೈರಣೆ ಎಷ್ಟು ಗಟ್ಟಿಯೋ! ಅಂಥಾ ಅವಮಾನದ ಮಾತುಗಳನ್ನೆಲ್ಲ ಹೇಗೆ ಸಹಿಸುವಿಯೋ?" ಎಂದನು.

"ಎದುರು ಸಿಟ್ಟಿನವರು ದುಡುಕಿನಿಂದ ಸ್ವಲ್ಪ ಬೈದರೆ ಅವರ ಒಳ್ಳೇಗುಣ ಮರೆತು ಹೋಗುತ್ತೆಯೇ? ಅವರ ಮನಸ್ಸು ಅಮೃತ ಗೊತ್ತಾ? ನನ್ನ ಮೇಲೆ ಅಭಿಮಾನವಿಟ್ಟವರೇ ಅವರೆಲ್ಲ." ಎಂದನು ರಂಗ.

"ಅವರು ಒಂದು ಮುಷ್ಟಿ ಊಟ ಹಾಕುತ್ತಾರೆ ಅಂತ ಅಂಥಾ ಬೈಗಳನ್ನು ಕೇಳಬೇಕೇನು?" ಎಂದು ದಾಮು ಕೇಳಿದನು.

"ನನ್ನ ಅಮ್ಮ ಬದುಕಿರುವವರೆಗೆ ಅದು ನನ್ನಿಂಧ ಸಾಧ್ಯವಾಗಲಿಲ್ಲ." ಎಂದನು ರಂಗ.

ಆಗ ದಾಮುಗೆ ಏನೋ ಅರ್ಥವಾಯಿತು. ಮಗನಿಗೆ ತಾಯಿಯೇ ದೊಡ್ಡ ಆಶ್ರಯ. ಮಗನನ್ನು ಯಾರು ಎಷ್ಟೇ ಬಯ್ದರೂ ಆದರಿಸಿ ತೀರುತ್ತಾಳೆ. ತಾಯಿ ಇಲ್ಲದ ಮಗನಿಗೆ ತಾಳ್ಮೆಯಿಲ್ಲದೆ ಹೋದರೆ ಅವನನ್ನು ನೋಡುವವರು ಯಾರೂ ಇರಲಾರರು.

ಆ ದಿನದಿಂದ ದಾಮು ತಾಯಿ ಹೇಳಿದ ಹಾಗೆ ಕೇಳುತ್ತ ತಾಳ್ಮೆಯಿಂದಿರಲು ಅಭ್ಯಾಸಮಾಡಿಕೊಂಡನು. ರಂಗನೂ ಉನ್ನತಿಗೊಂಡನು.



# ವಿಚಿತ್ರ ಮನಸ್ಸು

**ಸಾಂ**ಬಯ್ಯ ಎಂಬವನು ಚೀಲತುಂಬಾ ಹಣವಿಟ್ಟುಕೊಂಡಿದ್ದರೂ ದೊಡ್ಡ ಜಿಪುಣ. ಅದರ ಮೇಲೆ ಅವನು ಇತರರನ್ನು ಯಾವಾಗಲೂ ಮನಸ್ಸಿನೊಳಗೆ ದ್ವೇಷಿಸುವವನು. ಅವನ ನಡೆವಳಿಕೆಗಳಿಂದ ಯಾರಿಗಾದರೂ ನಷ್ಟವೋ ಕಷ್ಟವೋ ಉಂಟಾದರೆ ಅವನ ಮನಸ್ಸಿಗೆ ಆನಂದವಾಗುತ್ತಿತ್ತು.

ಅವನು ಮಧ್ಯರಾತ್ರಿಯಾದ ಮೇಲೆ ಎರಡು ಮೂರು ಸಾರಿ ಎದ್ದು ತನ್ನ ಕಬ್ಬಿಣದ ಪೆಟ್ಟಿಗೆಯನ್ನು ತೆರೆದೂ ಮುಚ್ಚೀ ಹಣ ಸರಿಯಾಗಿದೆಯೋ ಇಲ್ಲವೋ ಎಂದು ನೋಡುತ್ತ, ಪಟ್ಟಿಗೆಯನ್ನು ಅತ್ತಿತ್ತ ಸರಿಸುತ್ತ ದೊಡ್ಡ ದೊಡ್ಡ ಸಪ್ಪಳ ಮಾಡುತ್ತಿದ್ದನು.

ಅದರಿಂದ ನೆರೆ ಕರೆಯವರಿಗೆ ನಿದ್ರಾಭಂಗವಾಗುತ್ತಿತ್ತು. ಅವರು ಅವನೊಂದಿಗೆ " ಏನ್ರೀದು ? ನಿಮ್ಮಿಂದಾಗಿ ದಿನಾರಾತ್ರಿ ನಮಗೆ ನಿದ್ದೆ ಇಲ್ಲ." ಎಂದರೆ, " ಏನು ಮಾಡಲಿ ? ಇಲಿಕಾಟ ಬೆಕ್ಕಿನ ಹಾರಾಟ ನನ್ನನ್ನೂ ಎಬ್ಬಿಸಿ ಹಾಕುತ್ತೇ " ಎನ್ನುವನು ಮನಸ್ಸಿನಲ್ಲೇ ಸಂತೋಷಿಸುತ್ತ.

ಸಾಂಬಯ್ಯನ ನೆರೆ ಮನೆಗೆ ಒಬ್ಬ ಬಂಧು ಬಂದಿದ್ದ. ಸಾಂಬಯ್ಯ ಎಬ್ಬಿಸುವ ಶಬ್ದಗಳಿಂದ ಅವನಿಗೂ ನಿದ್ದೆ ಮಾಡಲಾಗದೆ ಹೋಯಿತು.

ಸಾಂಬಯ್ಯನ ಸಮಾಚಾರ ತಿಳಿದುಕೊಂಡ ಆ ಬಂಧು, ಮರು ದಿನ ಸಾಂಬಯ್ಯನ ಬಳಿಗೆ ಬಂದು, " ನಿಮ್ಮಿಂದ ನಿಮ್ಮ ನೆರೆಕರೆಯವರಿಗೆಲ್ಲ ದೊಡ್ಡ ಉಪಕಾರ. ನೀವು ರಾತ್ರಿ ಮಾಡುವ ಶಬ್ದಗಳ ಮೂಲಕವಾಗಿ ಈ ಬೀದಿಗೆ ಕಳ್ಳರ ಭಯವೇ ಇಲ್ಲ " ಎಂದನು.

ಆ ದಿನದಿಂದ ಸಾಂಬಯ್ಯ ರಾತ್ರಿಯಲ್ಲಿ ಸಪ್ಪಳವೆಬ್ಬಿಸುವುದನ್ನು ಬಿಟ್ಟನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೮೦ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Subhash G. Shenoy



Prabhakar Mahadik

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜೂನ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಯಾ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಏಪ್ರಿಲ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಮುಂದಡಿಯಿಟ್ಟಲ್ಲಿ ಈ ಜತೆ ತಪ್ಪುತ್ತೆ**

ಎರಡನೇ ಫೋಟೋ: **ಒಂದೇ ಕಂಬದಲ್ಲಿ ಇಷ್ಟೆಲ್ಲ ನಿಲ್ಲುತ್ತೆ!**

ಕಳುಹಿಸಿದವರು: ಪಿ. ಸಃಮನರಾವ್

ದುರ್ಗಾಮನೆ, ಮಂಗಳೂರು-೩.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.







ಏಕಾಏಕಿ ಒಬ್ಬ ಮೋಣತು ನುಗ್ಗಿ ಬರುತ್ತಾನೆ
ಶಬ್ದ ಮಾಡಬೇಡಿ ನಿಮ್ಮಲ್ಲಿರುವುದನ್ನು ಸುಮ್ಮನೆ ಕೊಟ್ಟುಬಿಡಿ




ಕಳ್ಳನಿಗೆ ಸಂದೇಹ ಬರುತೇ. ಆ ಮೇಲೆ ಮಿಠಾಯಿಗಳನ್ನು ತೆಗೆದುಕೊಳ್ಳುತ್ತಾನೆ
ಹೇ, ಇವು ತುಂಬಾ ಚೆನ್ನಾಗಿವೆ. ಇವುಗಳು ಏನು?
ನ್ಯೂಟ್ರಿನ್ ನಿಸ್ಸಂದೇಹವಾಗಿ!
ಸರಿ, ಎಲ್ಲಾ ಉಳಿದಿರುವುದನ್ನೂ ಕೊಡಿ




ಸರಿ, ಅವನು ಎಲ್ಲಾ ತೆಗೆದು ಕೊಂಡು ಬಿಟ್ಟ ನಾವೇನು ಮಾಡೋಣ?






CAS/NC/41 KAN 80

# ಟ್ರಿನ್ ಟ್ರಿನ್ ಟ್ರಿನ್ ಬಾರಿಸಿ ಗಂಟೆ!



## ಶಾಲೆಗೆ ನಡೆದ ಕಾಸುಕುಮಾರ, ಕೆಂಪು ಸೈಕಲ್ ಸವಾರ!

ರಜೆಯೂ ಮುಗಿಯಿತು, ಶಾಲೆಯು ತೆರೆಯಿತು
ಎಲ್ಲರ ದೃಷ್ಟಿಯು ಅವನೆಡೆ ಹರಿಯಿತು
ಸುತ್ತುತ್ತಿರುವ ಕಾಸುಕುಮಾರ
ಗಂಟೆಯು ನೆಂಟ ಟ್ರಿನ್ ಟ್ರಿನ್ ಕುಮಾರ!



"ಎಂಥಾ ಸುಂದರ ಸೈಕಲ್"
ನೋಡಿದ, ಕಣ್ಣಿಂದ
ಕಾರಿದ ಕರಡೆಪ್ಪ




ಹೊಟ್ಟೆಯು ಉರಿದಿರೆ ಸಿಂಗಪ್ಪ,
ಗುಡುಗಿದ 'ಲೋ ಕಾಸಪ್ಪ'




"ಇಲ್ಲ ಇಲ್ಲ" ಎಂದ ಕಾಸುಕುಮಾರ
'ನನ್ನದು ಇದು ಕೆಂಪು ಸೈಕಲ್ಲು
ಕಾಸಿಗೆ ಕಾಸು ಜೋಡಿಸಿ ನಾನು
ಹೊಟ್ಟೆಯಲ್ಲಿ ಇದೊ ಉಳಿಸಿರುವೆ
ನಿಮಗೆ ಹೊಟ್ಟೆಯುರಿ ತಂದಿರುವೆ'

ಸಹಿಸಲಾರದು ಕಾಗೆಮರಿ




ಎಲ್ಲರ ಕರೆದು ಗುಂಪನು ಮಾಡಿ
ಹೇಳಿತು ಬುದ್ಧಿಯ ಆ ಹಕ್ಕಿ
"ಬನ್ನಿ, ತಂತ್ರವ ಹೂಡೋಣ
ಅವನ ಸೈಕಲ್ ಕಸಿಯೋಣ ಸರಿಕೀಲೆ ಸವಾರಿ
ಮಾಡೋಣ". ಎಲ್ಲರು ಹೊಂಚನು
ಹೂಡಿದರು



ಎಲ್ಲರು ಸಂಚನು ಒಪ್ಪಿದರು
ಲಂಬೂ ಓಡಲಿ ಹಿಡಿಯಲಿಕೆ
ಕಾಸುಕುಮಾರನ ತಡೆಯಲಿಕೆ
ಕಾಗೆಯು ಪಕ್ಕವ ಬಡಿಯಲಿ
ಪಾಂಚಜನ್ಯವನು ಊದಲಿ!
ಗಜೇಂದ್ರ ಆಗಲಿ ಅಡ್ಡಗೋಡೆ!
ತಟ್ಟು ಕಿಟ್ಟೂ ಒದೆಯಲಿ
ಕಾಸುಕುಮಾರ ಓಡಲಿ
ನಮ್ಮದು ಸೈಕಲ್, ನಮ್ಮ ಸವಾರಿ!




ಮುಂದೇನು? ಸಖ ಮುಂದೇನು?

ಲಂಬೂ ಓಡಲು ತೊಡಗಿದ ಸಮಯ, ಕಾಸುಕುಮಾರನು
ಓಡುವ ಸಮಯ ಕೆಂಪು ಹೊಸ ಸೈಕಲ್ ಕಾಲಲಿ ತುಳಿದಾಡೆ, ಎಲ್ಲರಿಗಿಂತ ದೂರಕೆ ಓಡೆ

ಗಿಳಿಯಪ್ಪನು ಗಿಡದ ಮೇಲಿಂದ
ಎಲ್ಲವ ನೋಡುತ ಅಂದ: 'ಗೋವಿಂದ!'
ಬಾಯಿ ತೆರೆಯುತ ಇಂತೆಂದ:




ಸ್ಟೇಟ್ ಬ್ಯಾಂಕಿನಲ್ಲಿ ಉಳಿಸಿರಿ
ನಿಮ್ಮ ಉಳಿತಾಯ ವರ್ಧಿಸುವುದನ್ನು ನೋಡಿರಿ

**ಸ್ಟೇಟ್ ಬ್ಯಾಂಕ್**
**ಬೆಳೆಯೋಣ ಬನ್ನಿ. ಬೆಳೆಯೋಣ**

SB-4840

# ರಾಮು ಮತ್ತು ಶ್ಯಾಮು

## ಅಪಹರಣ!






















ರಸಭರಿತ
ಸ್ವಾದಿಷ್ಟ
ಬಲು ಇಷ್ಟ

ಪಾರ್ಲೆ

ಪಾಪಿನ್ಸ್

ಹಣ್ಣುಗಳ ಸ್ವಾದವುಳ್ಳ
ಮಿಠಾಯಿಗಳು






5 ಹಣ್ಣುಗಳ ಸ್ವಾದಗಳು—
ರಾಸ್ಪ್‌ಬೆರಿ, ಅನಾನಸ್, ನಿಂಬೆ,
ಕಿತ್ತಳೆ ಮತ್ತು ಮುಸಂಬಿ.

everest/79/PP/262-kn.